

# ಹಣತೆ



(ಖಾಸಗಿ ಪ್ರಸಾರಕ್ಕಾಗಿ ಮಾತ್ರ)

ಸಂಪುಟ 13 | ಜನವರಿ - ಮಾರ್ಚ್ 2010 | ಸಂಚಿಕೆ 1

ಸಾಹಿತ್ಯ, ಸಂಸ್ಕೃತಿ, ಕಲೆ ಮತ್ತು ಕನ್ನಡ ಭಾಷೆಯ ಸಂವರ್ಧನೆಗೆ ಮೀಸಲಾದ
ಶಿವರಾಮ ಕಾರಂತ ವೇದಿಕೆ (ರಿ)ಯ ತ್ರೈಮಾಸಿಕ ಪತ್ರಿಕೆ



ಕವಿ ಎಚ್. ಎಸ್. ವೆಂಕಟೇಶಮೂರ್ತಿ




ದಿನಾಂಕ 10-10-09 ರಂದು
ಶಿವರಾಮಕಾರಂತರ ಹುಟ್ಟುಹಬ್ಬದ ಸಂದರ್ಭದಲ್ಲಿ ತೆಗೆದ ಭಾವಚಿತ್ರ.
ಚಿತ್ರದಲ್ಲಿ ಕೋಟೇಶ್ವರ ಸೂರ್ಯನಾರಾಯಣರಾವ್, ಶ್ರೀ ಎಂ. ನಾಗೇಂದ್ರಸ್ವಾಮಿ
ಮತ್ತು ಡಾ|| ಪಿ.ಎಸ್. ಗೀತಾ




ದಿನಾಂಕ 14-02-10 ರಂದು
ವೇದಿಕೆಯ ಆಶ್ರಯದಲ್ಲಿ ನಡೆದ ಎಂ.ವಿ.ಸೀ. ಶತಮಾನೋತ್ಸವದಲ್ಲಿ
ಡಾ|| ನಾ. ಗೀತಾಚಾರ್ಯ, ಶ್ರೀ ಎಸ್.ವಿ. ಶ್ರೀನಿವಾಸರಾವ್,
|| ಪಿ. ವಿ. ನಾರಾಯಣ ಮತ್ತು ಶ್ರೀ ನಂ. ನಂಜಪ್ಪ

# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

ಸಂಪುಟ 13 | ಜನವರಿ - ಮಾರ್ಚ್ 2010 | ಸಂಚಿಕೆ - 1

## ಪರಿವಿಡಿ

ಪುಟಸಂಖ್ಯೆ

# ಸಂಪಾದಕೀಯ

ಪ್ರಿಯ ಓದುಗ,

ಜುಲೈ - ಆಗಸ್ಟ್ 2008ರ ಹಣತೆಯಲ್ಲಿ ನಮ್ಮ ನೆಚ್ಚಿನ ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರ ಕುರಿತು ಸಂಚಿಕೆಯೊಂದನ್ನು ಹೊರತರುವ ಉದ್ದೇಶವನ್ನು ಪ್ರಕಟಿಸಿ ಅದಕ್ಕಾಗಿ ಲೇಖನಗಳನ್ನು ಆಹ್ವಾನಿಸಿದ್ದೆವು. ಆ ನಮ್ಮ ಬಯಕೆ ಈಡೇರಲು ಇಷ್ಟು ದಿನಗಳ ತನಕ ಕಾಯಬೇಕಾಯಿತು. ಇತ್ತೀಚೆಗೆ ಡಾ. ಎಚ್.ಎಸ್. ವಿಯವರ ಸಮಗ್ರ ಕವಿತೆಗಳು, ಸಮಗ್ರ ನಾಟಕ ಹಾಗೂ ಸಮಗ್ರ ಕಥಾ ಸಂಕಲನದ ಬಿಡುಗಡೆಯ ಸಂದರ್ಭದಲ್ಲಿ ರವೀಂದ್ರ ಕಲಾ ಕ್ಷೇತ್ರದಲ್ಲಿ ನಡೆದ ಅರ್ಥಪೂರ್ಣ ಸಮಾರಂಭದಲ್ಲಿ ಭಾಗವಹಿಸಿದ ನನಗೆ ಬೆಂಗಳೂರಿನ ಈ ಪೂರ್ವೋತ್ತರ ಭಾಗದಲ್ಲಿ ನಮ್ಮ ಸಂಸ್ಥೆಯೂ ಡಾ. ಎಚ್.ಎಸ್.ವಿ. ಅವರ ಅಭಿನಂದನಾ ಕಾರ್ಯಕ್ರಮವೊಂದನ್ನು ಹಮ್ಮಿಕೊಳ್ಳಬೇಕೆಂಬ ತೀವ್ರತರ ಹಂಬಲವಾಗಿ ಆ ದಿಸೆಯಲ್ಲಿ ನಾವು ಉದ್ಯುಕ್ತರಾದೆವು. ದಿನಾಂಕ 27.3.2010 ರ ಶನಿವಾರ ಶಿವರಾಮ ಕಾರಂತ ವೇದಿಕೆ ಏರ್ಪಡಿಸಿರುವ ಈ ಸಮಾರಂಭದ ಸಂದರ್ಭದಲ್ಲಿ ಈ ಹಣತೆಯನ್ನು ತಮ್ಮ ಮುಂದೆ ಇಡುತ್ತಿದ್ದೇವೆ. ಮಾಡದೇ ಇರುವುದಕ್ಕಿಂತ ತಡವಾಗಿ ಮಾಡುವುದೇ ಲೇಸು ಎಂಬ ಆಂಗ್ಲ ನಾಣ್ನುಡಿಯೊಂದಿದೆ. ಈ ಸಂಚಿಕೆಯಲ್ಲಿ ನಮ್ಮ ಉಪಾಧ್ಯಕ್ಷರಾದ ಎಸ್.ಆರ್. ವಿಜಯಶಂಕರ ಹಾಗೂ ಬಿ.ವಿ. ಕೆದಿಲಾಯರ ಮೌಲಿಕ ಲೇಖನಗಳಿವೆ. ಅವರಿಗೆ ನನ್ನ ವಿಶೇಷ ಕೃತಜ್ಞತೆಗಳು. ನಾಡಿನ ಧೀಮಂತ ಸಾಹಿತಿಗಳೆಲ್ಲರ ಕುರಿತು ವ್ಯಾಸಂಗಗೋಷ್ಠಿ, ಉಪನ್ಯಾಸ, ಸಂವಾದ ಕಾರ್ಯಕ್ರಮಗಳನ್ನು ಕಳೆದ ಹದಿನೇಳು ವರ್ಷಗಳಿಂದ ನಿರಂತರವಾಗಿ ಮಾಡುತ್ತ ಬಂದಿರುವ ನಮ್ಮ ಸಂಸ್ಥೆ ಹದಿನೆಂಟರ ಯೌವನಕ್ಕೆ ಕಾಲಿಟ್ಟಿದೆ. ಸದ್ಯ ನಮ್ಮಂತಹ ಕಿರುಪತ್ರಿಕೆಗಳಿಗೆ ಲೇಖನ ಮತ್ತು ಜಾಹೀರಾತುಗಳನ್ನು ಒದಗಿಸಿಕೊಳ್ಳುವುದೇ ದುಸ್ತರ. ದಿನಾಂಕ 19-1-2010ಕ್ಕೆ ನಮ್ಮ ಸಂಸ್ಥೆ 17 ಸಂವತ್ಸರಗಳನ್ನು ಪೂರೈಸಿದೆ. ಆದರೂ ನಾವು ಬಲಿಷ್ಠ ಸಂಘಟನೆಯಾಗಿ ಬೆಳೆದಿಲ್ಲ. ಇದು ಈ ಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿಯಾದ ನನ್ನ ವೈಫಲ್ಯ ಎಂದು ಒಪ್ಪಿಕೊಳ್ಳಲೇಬೇಕು.

ಯಾವುದೇ ಸಂಘಟನೆ ಯಶಸ್ವಿಯಾಗಬೇಕಾದರೆ ಅದಕ್ಕೆ ಹೊಸ ಪದಾಧಿಕಾರಿಗಳ ಸೇರ್ಪಡೆಯಾಗಬೇಕು.

ಹಾಗೆ ಸೇರ್ಪಡೆಯಾದವರು ಸಂಸ್ಥೆಯ ಏಳಿಗೆಗೆ ದುಡಿಯಬೇಕಲ್ಲದೆ ಸಂಸ್ಥೆಯನ್ನು ತಮ್ಮ ಲಾಭಕ್ಕಾಗಿ ಉಪಯೋಗಿಸಿಕೊಳ್ಳಬಾರದು.

ಕೆಲವೊಮ್ಮೆ ಈ ಸಾಹಿತ್ಯದ ಪರಿಚಾರಿಕೆ ಅವರ ವೈಯಕ್ತಿಕ ಬೆಳವಣಿಗೆ ಹಾಗೂ ಸಾಂಸಾರಿಕ ಸುಖಶಾಂತಿಗಳನ್ನೂ, ಆರೋಗ್ಯವನ್ನೂ ಕದಡಬಲ್ಲದು. ಹಾಗಾಗದಿರುವಂತೆ ಎಲ್ಲಾ ಪದಾಧಿಕಾರಿಗಳೂ ಎಚ್ಚರ ವಹಿಸಬೇಕು. ಇಲ್ಲದಿದ್ದರೆ ನಾಯಿಕೊಡೆಗಳಂತೆ ಸಂಸ್ಥೆಗಳು ಹುಟ್ಟುತ್ತವೆ, ಸಾಯುತ್ತವೆ.

ಕನ್ನಡ ಸಾಯುತ್ತಿದೆ ಎನ್ನುವ ಕೂಗು ಒಂದೆಡೆ, ಕನ್ನಡಕ್ಕೆ ಅಳಿವಿಲ್ಲ, ಜಗತ್ತಿನ ಏಳು ಮುಖ್ಯ ಭಾಷೆಗಳಲ್ಲಿ ಕನ್ನಡವೂ ಒಂದು ಎಂದು ಸುದ್ದಿ ಕೇಳಿ ಬರುತ್ತಿದೆ. ನಮ್ಮ ನಮ್ಮ ದೃಷ್ಟಿಕೋನದಿಂದ ನಾವು ಜಗತ್ತಿನ ವಿದ್ಯಮಾನಗಳನ್ನು ಅರ್ಥೈಸುತ್ತೇವೆ. ಶಿವರಾಮಕಾರಂತರು ಪ್ರತಿಪಾದಿಸಿದ ಬದುಕಿನ ಬಗ್ಗೆ ಅದಮ್ಯ ಉತ್ಸಾಹ, ಆಶಾವಾದ, ನಿರಂತರ ಶ್ರಮ, ಬದುಕಿನಲ್ಲಿ ಪ್ರಾಮಾಣಿಕತೆ ಮುಂತಾದ ತತ್ವಗಳನ್ನು ಎಷ್ಟು ಸಾಧ್ಯವೋ ಅಷ್ಟು ಮೈಗೂಡಿಸಿಕೊಂಡು ವೇದಿಕೆಯ ಸಂಸ್ಥಾಪಕ ಕಾರ್ಯದರ್ಶಿಯಾಗಿ ನನಗೆ ಕಂಡಂತೆ, ನನ್ನ ಕೈಲಾದಷ್ಟು ಕೆಲಸವನ್ನು ಈ ತನಕ ಮಾಡಿದ್ದೇನೆ. ಕನ್ನಡ ಉಳಿಯುವುದು, ಬೆಳೆಯುವುದು ಘೋಷಣೆಗಳಿಂದಲ್ಲ. ಕನ್ನಡದ ಪೋಷಣೆಗೆ ಬೇಕಾಗಿರುವುದು ತ್ಯಾಗ ಮನೋಭಾವ. 20ನೆಯ ಶತಮಾನದಲ್ಲಿ ಕನ್ನಡಕ್ಕಾಗಿ ದುಡಿದ ಸಹಸ್ರಾರು ಮಹಾನುಭಾವರು ಜಾತಿ, ಮತ, ಭೇದಗಳನ್ನು ಮರೆತು, ಎಲ್ಲರನ್ನೂ ಸ್ಮರಿಸುವ, ಎಲ್ಲರಲ್ಲೂ ಕಂಡುಬಂದ ಒಳ್ಳೆಯ ಗುಣಗಳನ್ನು ಮಾತ್ರ ಸ್ವೀಕರಿಸುವ, ಮನೋಭಾವವನ್ನು ಹೊಂದಿದ್ದರು. ಗುಂಪುಗಾರಿಕೆಯಿಂದ ದೂರವಿರುವ ಕನ್ನಡ ಪರ ಸಂಸ್ಥೆಗಳು ಮಾತ್ರ ಕರ್ನಾಟಕಕ್ಕೀಗ ಬೇಕು.

ಕನ್ನಡಿಗರೇ, ದಿನಾಂಕ 16.03.2010ರ ವಿಕೃತಿ ಸಂವತ್ಸರ ಆರಂಭವಾಗಿದೆ. ಸಂವತ್ಸರದ ಹೆಸರು ಏನೇ ಸೂಚಿಸಲಿ, ನಮ್ಮ ಬಾಳು ಮಾತ್ರ ವಿಕೃತವಾಗದಿರಲಿ. ಯುಗ ಯುಗಾದಿ ಕಳೆದರೂ, ಯುಗಾದಿ ಮರಳಿ ಬರುತಿದೆ ಎನ್ನುವ ಕವಿವಾಣಿಯಂತೆ ಹೊಸ ವರ್ಷವನ್ನು ಆಸೆಯ ಕಂಗಳಿಂದ ಎದುರುನೋಡೋಣ. ಈ ಸಂಚಿಕೆಯ ಬಗ್ಗೆ ನಿಮ್ಮ ಪ್ರತಿಕ್ರಿಯೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆಯಿರಿ.

16.03.2010
ಚಾಂದ್ರಮಾನ ಯುಗಾದಿ

ಇಂತು

*ಪಾ. ಚಂದ್ರಶೇಖರ ಚಡಗ*
ವ್ಯವಸ್ಥಾಪಕ ಸಂಪಾದಕ

ಕವನ

# ಶ್ರೀ ಸಂಸಾರಿ

ಶ್ರೀ ರಾಮನು ತಾನೊಬ್ಬನೆ ಎಲ್ಲೂ ಪೂಜೆಗೊಳ್ಳುವುದು ಕಂಡಿಲ್ಲ
ಹೋಗಿ ನೋಡಿ ನೀವ್ಯಾವುದೆ ಊರಿನ ಯಾವುದೆ ರಾಮನ ಗುಡಿಗೆ !
ಯಾವುದೇ ಮನೆಯ ಗೋಡೆಯ ಮೇಲಿನ ಪಟವನ್ನಾದರು ನೋಡಿ
ರಾಮನೊಬ್ಬನೇ ಎಂದೂ ಎಲ್ಲೂ ಬಾರನು ಪೂಜೆಯ ಮಣೆಗೆ

ಎಡಕ್ಕೆ ಸೀತೆ, ಬಲಕ್ಕೆ ಲಕ್ಷ್ಮಣ, ಕಾಲ ಕೆಳಗೆ ಹನುಮಂತ
ಕೆಲವು ಪಟದಲ್ಲಿ ತಮ್ಮ ಶತ್ರುಘ್ನ ಚಾಮರ ಹಾಕುವ ಭಂಗಿ
ಹಿಂದೆ ಕೊಡೆ ಹಿಡಿದ ಭರತ, ವಿಭೀಷಣ-ಜಾಂಬವ-ದೊರೆ ಸುಗ್ರೀವ
ಕೆಲವು ಪಟದಲ್ಲಿ ಮಾಂಡವಿ, ಊರ್ಮಿಳೆ, ನಗುತ್ತಿರುವ ಶ್ರುತಕೀರ್ತಿ

ಉಳಿದ ದೇವರಂತೆಂದಿಗು ರಾಮ ಒಬ್ಬನೆ ಪೂಜೆಯ ಕೊಳ್ಳನು
ರಾಮಪೂಜೆ ಬರಿ ರಾಮನ ಪೂಜೆಯೆ ? ಅದೊಂದು ಕುಟುಂಬ ಪೂಜೆ
ಎಷ್ಟು ವಿಶಾಲ... ಎಷ್ಟು ವಿಸ್ತೃತ... ಶ್ರೀರಾಮನ ಈ ಸಂಸಾರ !
ಇದು ತಾನಾಯಿತು ತನ್ನ ಕಣ್ಗೊಂಬೆ ತಾನಾಯಿತು-ಚೌಕಟ್ಟಲ್ಲ.

ರಾಮ ಸಂಸಾರ ಒಟ್ಟು ಸಂಸಾರ. ತಮ್ಮಂದಿರು ನಾದಿನಿ ತಾಯಿ
ಆಳು ಕಾಳಿಗೂ ಮನ್ನಣೆಯುಂಟು. ಜೊತೆಗೆ ಗೆಳೆಯರಿಗು ಕೂಡ
ಅಯೋಧ್ಯೆಯಲ್ಲೇ ಲಂಕೆ - ಕಿಷ್ಕಿಂಧ - ಗುಡ್ಡಗಾಡು ಸೇರಿರಲು
ಆರ್ಯ - ದ್ರಾವಿಡ - ಆದಿವಾಸಿಗೂ ರಾಮಪೂಜೆಯಲಿ ಪಾಲು

ಸಂಸಾರದ ಈ ಸಾರ ವ್ಯವಸ್ಥೆ ಪೂಜೆಗೊಳ್ಳುದೀ ನೆಲದಲ್ಲಿ
ನಿತ್ಯಾರಾಧನೆ ನಿತ್ಯನೈವೇದ್ಯ ರಾಮನ ಪೂಜೆಯ ನೆವದಲ್ಲಿ
ವರ್ಗ ವರ್ಣ ವೈಷಮ್ಯ ಲೆಕ್ಕಿಸದೆ ಪೂಜೆಗೊಳ್ಳುತಿದೆ ಸಂಸಾರ
ಸ್ವರ್ಗವೆನ್ನುವುದು ಇನ್ನೆಲ್ಲಿರುವುದು - ಇಲ್ಲೇ ಕಾಲಡಿ ನೆಲದಲ್ಲೆ

ಈ ಕೌಟುಂಬಿಕ ಗೋಷ್ಠಿ ಪಟದಲ್ಲಿ ಸ್ನೇಹ ಮೋಹ ತಿಕ್ಕಾಟಗಳು !
ತಮ್ಮ ತಮ್ಮ ಗಂಡಂದಿರ ಪಕ್ಕ ಬೀಗುವರೆನಗೆ ಹೆಣ್ಣುಗಳು !
ಹೆಗಲಿಗೆ ಹೆಗಲನು ತಾಗಿಸಿ ನಿಂತಿದ್ದಾನೆ ಜಾಂಬವನು ಭರತನಿಗೆ
ಚಿತ್ರಪಟದ ಅಂದಾಜೇ ಇಲ್ಲ ತಿರುವುಮೂತಿ ಹನುಮಂತನಿಗೆ

ಕರಿಯ ಮುಸುಕಲ್ಲಿ ಬಿಂಬಗ್ರಾಹಿ ಮಂದ್ರದಲ್ಲಿ ಗೊಣಗಿದ ಹೀಗೆ :
"ಹೆಗಲ ಬಿಲ್ಲ ಕೆಳಗಿಳಿಸಿರಿ ಸ್ವಾಮಿ, ಜಾಗ ಉಂಟು ಇನ್ನೊಬ್ಬರಿಗೆ !"
ಥಟ್ಟನೆ ನೆನಪು ಸೇತುರಾಮನಿಗೆ ಮರಳು ಸೇವೆಯ ಅಳಿಲುಮರಿ !
ರಾಮ ಧ್ಯಾನಿಸಿದ : ಮರುಕ್ಷಣದಲ್ಲಿ ಅಳಿಲಿದೆ ಆತನ ಹೆಗಲಲ್ಲಿ.

*ಎಚ್.ಎಸ್. ಶಿವಪ್ರಕಾಶರ ಉತ್ತರ ರಾಮಾಯಣ ಮತ್ತು..... ಕವನ ಸಂಕಲನದಿಂದ*

# ಎಚ್.ಎಸ್.ವಿ. ಅವರ ಶ್ರೀ ಸಂಸಾರಿ

*- ಎಸ್.ಆರ್. ವಿಜಯಶಂಕರ*

ಕಾವ್ಯ ಕಾಲದ ಅನುಭವವನ್ನು ಹೊಸದಾಗಿ ಕಟ್ಟಿ ಕಾಣಿಸುತ್ತದೆ. 'ತಿಣಿಕಿದನು ಫಣಿರಾಯ ರಾಮಾಯಣ ಕವಿಗಳ ಭಾರದಲಿ' ಎಂದು ವ್ಯಂಗ್ಯವಾಡಿದರೂ ಕಾಲಕಾಲಕ್ಕೆ ಕವಿಗಳು ರಾಮನ ಮೂಲಕ ತಮ್ಮ ಹಾಗೂ ಕಾಲದ ಅನುಭವವನ್ನು ಅರಸಿ ಅರಗಿಸಿಕೊಳ್ಳುವುದು ಕಮ್ಮಿಯಾಗಿಲ್ಲ. ಡಾ|| ಎಚ್.ಎಸ್. ವೆಂಕಟೇಶಮೂರ್ತಿ ಅವರ 'ಶ್ರೀ ಸಂಸಾರಿ' ಎಂಬ ಕವನ ನಮ್ಮ ಕಾಲದಲ್ಲಿ ಪುನಃ ರಾಮನನ್ನು ಹೊಸದಾಗಿ ಕಾಣಿಸುತ್ತದೆ. ಅವರ ತೀರಾ ಈಚಿನ ಉತ್ತರಾಯಣ ಕವನ ಸಂಗ್ರಹದ ಮೊದಲ ಕವನವೇ ಅದು.

ಕಳೆದ ಶತಮಾನದಲ್ಲಿ ನಮ್ಮ ಕಾಲದ ರಾಮನನ್ನು ಮೊದಲು ಕಾಣಿಸಿದವರು 'ರಾಮಯಣ ದರ್ಶನಂ' ರಚಿಸಿದ ಕುವೆಂಪು. ಆ ಮಹಾಕಾವ್ಯದ ಹೊರಗೆ ಕನ್ನಡ ಕವನ ಪರಂಪರೆಯಲ್ಲಿ ರಾಮನ ಬಗ್ಗೆ ಮೂರು ಮೈಲಿಗಲ್ಲು ಕವಿತೆಗಳನ್ನು ಹೆಸರಿಸಬಹುದು. ಮೊದಲನೆಯದು ಮಾಸ್ತಿಯವರ 'ರಾಮನವಮಿ' ಎಂಬ ದೀರ್ಘ ಕವನ. (182 ಚತುಷ್ಪದಿಗಳು) ಮಾಸ್ತಿ ಸಂಪೂರ್ಣ ನಂಬುಗೆಯ ದೈವ ಭಕ್ತರು. ಅಂತಹ ನಂಬುಗೆ ಬಾಳನ್ನು ಬೆಳಗಬೇಕು. ಮಾನವನನ್ನು ದೈವತ್ವದಕಡೆ ಏರಿಸಲು ಅದು ಸಹಕಾರಿಯಾಗಬೇಕು. ಆದ್ದರಿಂದ ಮಾಸ್ತಿ ಆ ಕವನದಲ್ಲಿ ಹೇಳುವಂತೆ "ಬಾಳನು ಬೆಳಗಲು ಬಲ್ಲ ನಂಬಿಕೆಯ / ನಾನು ಸತ್ಯ ಎಂಬೆ; / ಇದ ಮಾಡದ ನುಡಿ ಏತರ ಸತ್ಯ ? / ಅದು ಸತ್ಯದ ಗೊಂಬೆ."

ಮಾಸ್ತಿಯವರ ಕವನದಲ್ಲಿ ರಾಮನವಮಿ ದಿನ ಬೋವನ ಹಳ್ಳಿಯ ಸ್ಥಳ ಪುರಾಣದಲ್ಲಿ ಪುಣ್ಯವಂತರಿಗೆ ಹಿಂದೆ ರಾಮ, ಸೀತಾ, ಲಕ್ಷ್ಮಣರು ಬಂದಿದ್ದ ಜಾಗದಲ್ಲಿ ಅವರು ಕಾಣಿಸುತ್ತಾರೆ. ದೂರದ ಮರದಡಿ ಬರುವವರು ಸೀತಾರಾಮರೇ ಎಂಬ ಸಂಶಯ ಕಾಡುತ್ತದೆ. ಬರುತ್ತಿದ್ದವರು ಮುದುಕ ಗೌಡನ ಮಗ ರಾಮು ಹಾಗೂ ಸೊಸೆ ಈರವ್ವ. ಆಗ ಕವಿ ಮಾಸ್ತಿ ಹೇಳುತ್ತಾರೆ : "ಮಾತಿನ ಜಾಣರು ಮನೆ ಮಗ ರಾಮು, /ಎಲ್ಲ ಹೆಣ್ಣು ಸೀತೆ,/ ಎಂದು ಹೇಳುವುದು ಕೇಳಿದೆ ನಾನು, / ಇದೇನು ಬರಿ ಮಾತೆ ?"

ಹೀಗೆ ನವೋದಯದ ಮಾಸ್ತಿಗೆ ಸಂಸಾರದೊಳಗೆ ಕಂಡ ರಾಮ ನವ್ಯದ ಗೋಪಾಲಕೃಷ್ಣ ಅಡಿಗರಿಗೆ ಸಂಸಾರದ ಒಳಗಿದ್ದೂ ಅವನ ಉಡಾಫೆಯಲ್ಲಿ ಗೋಚರಿಸುತ್ತಾನೆ. ಅಡಿಗರ 'ಶ್ರೀ ರಾಮನವಮಿಯ ದಿವಸ' ಕವನದ ಎರಡು ಸಾಲುಗಳು : "ಮಣ್ಣಿನಣಿಗಿಯ ಸೆಳವಿನಲ್ಲಿ ಲಂಕೆಗೆ ಬೆಂಕಿ;/ ಸುಟ್ಟಿಲ್ಲದೇ ಮುಚ್ಚಿನೆಂಬುಡಾಫೆ" ಸೀತೆಯನ್ನು ಕದ್ದೊಯ್ದಾಗ ಸಾಮಾನ್ಯ ಮಾನವ ಪ್ರೇಮಿಯಂತೆ ಅತ್ತು ಕಣ್ಣೀರಿಳಿಸಿದ ರಾಮನಿಗೂ ಅವಳನ್ನು ಅಗ್ನಿ ಪ್ರವೇಶ ಮಾಡಿಸಿಯೇ ಪಡೆಯಬೇಕು.

ಆದರೆ ಅಡಿಗರಿಗೆ ಇಂದು ನಮ್ಮ ರಾಮನನ್ನು ನಮ್ಮ ಅನುಭವದಲ್ಲಿ ಮತ್ತೆ ಸೃಜಿಸಿಕೊಳ್ಳಬೇಕಾದ ಅವಶ್ಯಕತೆ ಇದೆ ಎಂಬ ಅರಿವು ಆಕಾಂಕ್ಷೆ ಎರಡೂ ಇದೆ. ಆದರೆ ಅಂತಹ ಸೃಷ್ಟಿಗೆ ಎಂತಹ ಏಕಾಗ್ರತೆ ಬೇಕೆಂದರೆ : "ಹುತ್ತಗಟ್ಟಿದೆ ಚಿತ್ತ ಮತ್ತೆ ಕೆತ್ತೀತೇನು/ ಪುರುಷೋತ್ತಮನ ಆ ಅಂಥ ರೂಪ-ರೇಖೆ?" ಅಡಿಗರ ಕವನ ಉದ್ದಕ್ಕೂ ವರ್ತಮಾನ ಹಾಗೂ ಪುರಾಣ/ಚರಿತ್ರೆಯ ರಾಮನ ತಿಳಿವು/ಅರಸುವಿಕೆಗಳಲ್ಲಿ ಹಿಂದೆ ಮುಂದೆ ಚಲಿಸುತ್ತಾ ಇದೆ.

ಅಡಿಗರ 'ಶ್ರೀ ರಾಮನವಮಿಯ ದಿವಸ' ಪ್ರಕಟವಾದ್ದು 1968ರಲ್ಲಿ, ಆ ಕವನದೊಳಗೆ ಸಂಕಲ್ಪ ಬಲದ ಜಾಗರಣೆಯ ನೆಲೆಗಳು ಅಂತರಂಗದ ಅರಸುವಿಕೆಗೆ ಎಡೆಗೊಡುತ್ತವೆ. ಆದರೆ ಆ ಕಾಲದ ಬಳಿಕ ನಿಧಾನವಾಗಿ ನಮ್ಮ ದೇಶದ ರಾಜಕೀಯ ಹಾಗೂ ಸಾಮಾಜಿಕ ಬಹಿರಂಗಗಳಲ್ಲಿ ರಾಮನನ್ನು ಪರಿಭಾವಿಸಿದ ಕ್ರಮ ಬೇರೆಯಾಗುತ್ತಾ ಬೆಳೆಯಿತು. ಮಾಸ್ತಿಯ ಬೋವನಹಳ್ಳಿಗೂ ಸಮಾನವಾಗಿ ಸೇರಿದ ಪುರಾಣದ ರಾಮ, ಅಯೋಧ್ಯೆಯಲ್ಲೇ ಹುಟ್ಟಿದ ಚರಿತ್ರೆಯ ರಾಮನಾದ. ಬಾಬರಿ ಮಸೀದಿಯನ್ನು ಮುರಿದು ಅಲ್ಲೇ ರಾಮ ಮಂದಿರ ನಿರ್ಮಾಣವಾಗಬೇಕು ಎಂಬ (ನಮ್ಮ ಹಳ್ಳಿಗಳ ಸ್ಥಳ ಪುರಾಣಗಳಿಗಿಂತಲೂ ಹೆಚ್ಚಿನ) ಚರಿತ್ರೆಯ ನಿಜ ಘಟನೆಯ ಸತ್ಯಕ್ಕೆ ಸಲ್ಲುವ ರಾಮನಾದ. ನಮ್ಮ ಸ್ಮೃತಿಗಿಂತಲೂ ಹೆಚ್ಚು ಚರಿತ್ರೆಯ ಸತ್ಯದ ಆಧಾರಗಳಿಂದ ಸಾಬೀತಾಗಬೇಕಾದ ರಾಮನಾದ.

ಅಂದರೆ, ನಮ್ಮ ಬಹಿರಂಗದ ರಾಜಕೀಯದಲ್ಲಿ ಸಲ್ಲಬೇಕಾದ ರಾಮನಾಗಿ ಅವನು ಪರಿವರ್ತಿತನಾದ. ಮಾಸ್ತಿಯವರ ಬಾಳನ್ನು ಬೆಳಗಬಲ್ಲ ನಂಬಿಕೆಯ

ಕುಟುಂಬದೊಳಗಿನ ರಾಮ ನಮ್ಮ ಸಾರ್ವಜನಿಕ ನೆನಪಿಂದ ಮಾಯವಾದ. ಅಂತರಂಗದ ಸರ್ಚ್‌ಲೈಟಲ್ಲಿ ಹುಡುಕಿ ಚಿತ್ತವನ್ನು ಹುತ್ತಗಟ್ಟಿಸಿಕೊಂಡು ಕಾಣಬೇಕಾದ ಅಡಿಗರ ರಾಮ ಕಾಣೆಯದ. ಅಷ್ಟೇ ಯಾಕೆ "ಮಂದಸ್ಮಿತ ಪೂರ್ವ ಭಾಷಿ" ಅಂದರೆ ವಾಲ್ಮೀಕಿ ಹೇಳಿದ ಮಾತಿಗೆ ಮೊದಲೇ ಮುಗುಳ್‌ನಗೆಯ ಶ್ರೀರಾಮನ ಬದಲು ಎಲ್ಲೆಲ್ಲೂ ಸಾರ್ವಜನಿಕ ಬ್ಯಾನರ್‌ಗಳಲ್ಲಿ, ಬೀದಿ ಬದಿಯ ಕಟೌಟ್‌ಗಳಲ್ಲಿ, ರಥಗಳ ಮೇಲಿನ ಫೋಟೋಗಳಲ್ಲಿ ಯುದ್ಧ ಸನ್ನದ್ಧನಾದ, ಒಂದು ಕೈಯಲ್ಲಿ ಬಾಣ, ಇನ್ನೊಂದು ಕೈಯಲ್ಲಿ ಬಿಲ್ಲು ಹಿಡಿದ ಗಂಭೀರ ಮುಖಮುದ್ರೆಯ ರಾಮನೇ ಎಲ್ಲೆಲ್ಲೂ ಕಾಣತೊಡಗಿದ. ಸೀತೆಯೊಡಗೂಡಿದ ರಾಮನ ಚಿತ್ರ ಸಾರ್ವಜನಿಕ ಜಾಗಗಳಲ್ಲಿ ಕಮ್ಮಿಯಾಗುತ್ತಾ ಕೇಸರಿ ಬಣ್ಣಗಳಿಂದ ಅಲಂಕೃತನಾದ ಬಿಲ್ಲನ್ನು ಹೆದೆಯೇರಿಸಿದ ಯುದ್ಧ ಸನ್ನದ್ಧನಾದ ರಾಮನೇ ಹೆಚ್ಚು ಕಾಣಿಸತೊಡಗಿದ.

ಅಂತರಂಗದಲ್ಲಿದ್ದ ರಾಮ ಹೀಗೆ ಸಂಘಟನೆಯ ಲಾಂಛನವೋ ಎಂಬಂತೆ ಬಿಲ್ಲೇರಿಸಿ ಕಾಣತೊಡಗಿದ ಬದಲಾವಣೆ ನನಗೆ ಹಗಲು ರಾತ್ರಿಗಳಷ್ಟು ದೊಡ್ಡ ವ್ಯತ್ಯಾಸವಾಗಿ ಕಾಣಿಸತೊಡಗಿತ್ತು. ವಾಲ್ಮೀಕಿಯ ಮುಗುಳ್‌ನಗೆಯ ರಾಮ ನಮ್ಮ ಸಾರ್ವಜನಿಕ ಜೀವನದಲ್ಲಿ ಬಿಗುಮಾನದ ರಾಮನಾಗಿ ಪರಿವರ್ತನೆಯಾದ ಆತಂಕದ ಕ್ಷಣಗಳಲ್ಲಿ 2007ರಲ್ಲಿ "ಪ್ರಜಾವಾಣಿಯ" ದೀಪಾವಳಿ ವಿಶೇಷ ಸಂಚಿಕೆಯಲ್ಲಿ ಮೊದಲ ಬಾರಿ ಎಚ್.ಎಸ್.ವಿ. ಅವರ "ಶ್ರೀ ಸಂಸಾರಿ" ಕವನ ಪ್ರಕಟವಾಯಿತು. ಗೆಳೆಯ ಕತೆಗಾರ ಕೆ. ಸತ್ಯನಾರಾಯಣ ಉತ್ಸಾಹದಿಂದ ಆ ಕವನವನ್ನು ಮೊದಲು ತೋರಿಸಿಕೊಟ್ಟರು. ಆ ಕ್ಷಣದಿಂದ ಸಾರ್ವಜನಿಕವಾದ ಹೊಸ ರಾಮ ಉಂಟು ಮಾಡಿದ ಆತಂಕಗಳನ್ನು ನೀಗಿಕೊಂಡು ಅಂತರಂಗದ ನನ್ನ ರಾಮನನ್ನು ಕಾಣಲು ಅನುವು ಮಾಡುತ್ತಾ ಎಚ್.ಎಸ್.ವಿ. ಅವರ 'ಶ್ರೀ ಸಂಸಾರಿ' ರಾಮ ನನ್ನಂತರಂಗದಲ್ಲಿ ನೆಲೆಸಿ ಸಾಂತ್ವನ ಹೇಳತೊಡಗಿದ.

ಮೊದಲಿಗೆ ಒಮ್ಮೆ ಈ ಸಂಚಿಕೆಯ 4ನೆಯ ಪುಟದಲ್ಲಿ ಕೊಟ್ಟ ಕವಿ ಎಚ್.ಎಸ್. ವೆಂಕಟೇಶಮೂರ್ತಿ ಅವರ 'ಶ್ರೀ ಸಂಸಾರಿ'ಯನ್ನು ಓದಿರಿ.

ಈ ಕವನ ಸರಳ ವಿವರಣೆಗಳಿಂದ ಅರ್ಥಾನುಸಾರಿ ಲಯದಲ್ಲಿ ಸಾಗುತ್ತದೆ. ಕವನದ ತುಂಬಾ ಚಿತ್ರಗಳಿದ್ದರೂ ಅವುಗಳ ಮೊದಲ ಆದ್ಯತೆ ರಾಮನ ಸಂಸಾರದ

ವಿವರಗಳನ್ನು ನಿರೂಪಿಸುವುದೇ ಆಗಿದೆ. ಆ ನೈಜ ವಿವರಗಳು ತಾವೇ ತಾವಾಗಿ ರಾಮನ ಸಂಸಾರವನ್ನು ವಿವರಿಸುತ್ತದೆ. ಹಾಗೆಯೇ ಇಂದಿಗೆ ಬೇಕಾದ ರಾಮನ ಹೊಸ ಚಿತ್ರಕ್ಕೆ ಕವನದ ಕೊನೆಗೆ ಬರುವ ರಾಮ ಕುಟುಂಬದ ಗ್ರೂಪ್‌ಫೋಟೋಕ್ಕೆ ಬೇಕಾದ ತಯಾರಿ ಮಾಡುತ್ತದೆ.

ಕವನ ಮೊದಲ ವಾಕ್ಯದಲ್ಲೆ ರಾಮ ಪೂಜೆಯನ್ನು ಒಪ್ಪಿಕೊಳ್ಳುತ್ತದೆ. ಆದರೆ ಅವನು ಒಬ್ಬನೇ ಪೂಜೆಯ ಮಣೆಗೆ ಬಾರನು ಎಂಬುದನ್ನೂ ಸಾರುತ್ತದೆ. 'ಮಣೆ' ಪದ ಆಸನ / ಗೌರವವನ್ನು ಸೂಚಿಸುತ್ತದೆ. ಜೊತೆಗೆ ಮನೆಯೊಳಗೆ ದೇವರ ಕೋಣೆಯಲ್ಲೂ ನಿತ್ಯ ಪೂಜೆಗೆ ದೇವರ ಮೂರ್ತಿಗಳನ್ನೂ, ಫೋಟೋ ಅಥವಾ ಚಿತ್ರಗಳನ್ನು ಮಣೆ ಮೇಲೆ ಜೋಡಿಸುವ ಕ್ರಮ. ಹೀಗೆ ಕವನ ಮೊದಲಿಗೆ, ಹೊರಗೆ ಸಾರ್ವತ್ರಿಕವಾಗಿ, ಅಯೋಧ್ಯೆಯಲ್ಲೇ ಸಲ್ಲಬೇಕಾದವನು ಎಂಬಂತಿದ್ದ ಇಂದಿನ ಸಾರ್ವಜನಿಕ ರಾಮನನ್ನು ನನ್ನ ಮನೆಯೊಳಗಿನ ಪೂಜೆಯ ಮನೆಗೆ ತಂದಿಡುತ್ತದೆ. ಪ್ರತಿ ಮನೆಗೂ ಹೊತ್ತೊಯ್ದು ಮುಟ್ಟಿಸಿಕೊಂಡು ಅಯೋಧ್ಯೆಗೆ ಸಾಗಿದ ಇಟ್ಟಿಗೆಯ ನೆನಪಿನ ನಡುವೆಯೇ ಯಾವುದೇ ಊರಿನ ರಾಮನ ಗುಡಿಯನ್ನು ಬೇಕಾದರೂ ನೋಡುವಂತೆ ಆಹ್ವಾನಿಸಿ ಅಯೋಧ್ಯೆಯ ಹೊರಗಿನ ನಮ್ಮ ನಮ್ಮ ಊರು, ಪ್ರದೇಶಗಳಿಗೆ ಸೇರಿದ ಗುಡಿಗಳನ್ನೂ ನೆನಪಿಸುತ್ತದೆ. ಯಾಕೆಂದರೆ ಅಲ್ಲಿ ಕಾಣುವುದು ಶ್ರೀರಾಮನ ಸಂಸಾರ. ಕಾವಿ ಶಾಟಿಯಲ್ಲಿ ಬಿಲ್ಲು ಹಿಡಿದ ಏಕಮಾತ್ರ ರಾಮನಲ್ಲ.

ಮುಂದೆ ಕವನ ಸೀತೆಯಿಂದ ಪ್ರಾರಂಭಿಸಿ ಶ್ರುತಕೀರ್ತಿವರೆಗೆ ರಾಮ ಸಂಸಾರವನ್ನು ವಿವರಿಸಿ ಒಂದು ಫೋಟೋ ಚೌಕಟ್ಟಿನಲ್ಲಿ ಕಾಣಿಸುತ್ತದೆ. ಶ್ರೀ ಸಂಸಾರಿಯನ್ನು ಹೀಗೆ ಒಂದು ಫೋಟೋದೊಳಗಿಟ್ಟು ತೋರಿಸುವುದರಿಂದಲೇ ಅವನು ಮತ್ತೆ ನಮ್ಮ ಮನೆ ಚಾವಡಿಗೆ ಬಂದು ಕೂರುತ್ತಾನೆ. ಸ್ವಲ್ಪ ಹಿಂದಿನ ಕಾಲದ ಮನೆಗಳನ್ನು ನೆನಪಿಸಿಕೊಂಡರೆ ತಿಳಿಯುತ್ತದೆ. ಚಾವಡಿಯಲ್ಲಿ ತೂಗು ಹಾಕಿದ ಫೋಟೋಗಳಲ್ಲಿ ಸಂಸಾರಸ್ಥ ಶ್ರೀರಾಮನ ಫೋಟೋವೂ ಒಂದಾಗಿರುತ್ತಿತ್ತು. ಹೀಗೆ ಹೊರಗೆ ಕಾಣುತ್ತಿದ್ದ ಏಕಾಂಗಿ ರಾಮ ಮತ್ತೊಮ್ಮೆ ಮನೆ ಚಾವಡಿಯಲ್ಲಿ ಬಂದು ಕೂತು ಬಿಡುತ್ತಾನೆ. ಬೀದಿಯಿಂದ ಮನೆಯೊಳಗೆ ಬಂದೊಡನೆ ನಮ್ಮ ಭಾವ ಬದಲಾಗುತ್ತದೆ. ಮನೆಯ ನೆಮ್ಮದಿಯ ಕ್ರಮ ಬೇಕಾಗುತ್ತದೆ. ಪೂಜೆ ಮಣೆಗೆ ಏರುವ ಪಥದಲ್ಲೂ ರಾಮ ಒಬ್ಬನೇ ಇರುವುದಿಲ್ಲ.

ಉಳಿದ ದೇವರಂತೆ ಎಂದಿಗೂ ರಾಮ ಒಬ್ಬನೇ ಪೂಜೆಯಕೊಳ್ಳನು ಎಂದು ಸಾರುವ ಕವಿ ಅದೊಂದು ಕುಟುಂಬ ಪೂಜೆ ಎಂದು ರಾಮನ ವಿಸ್ತೃತ ಸಂಸಾರವನ್ನು ನೆನಪಿಸುತ್ತಾನೆ. ಮುಂದಿನ ವಾಕ್ಯದ ಚೌಕಟ್ಟು ಎಂಬ ಪದ ಬಹಳ ಮುಖ್ಯ. ಅದು ರಾಮನ ಸಂಸಾರದ ಫೋಟೋ ಅಥವಾ ಚಿತ್ರಪಟದ ಚೌಕಟ್ಟನ್ನು ಹೇಳುವಂತೆ ರಾಮನ ಮನಸ್ಸಿನ ಚೌಕಟ್ಟನ್ನೂ ಸೂಚಿಸುತ್ತದೆ. ಅದು 'ತಾನಾಯಿತು' ಎಂದು ಒಬ್ಬನೇ ಸಾಕು ಎಂಬ ತಾನೊಬ್ಬ ಮಾತ್ರ ಸಾಕು ಎಂಬ (ಸ್ವಾರ್ಥದ) ಚೌಕಟ್ಟು ಅಲ್ಲ. ಅವನ ಸಂಸಾರದಲ್ಲಿ ತನ್ನ ತಕ್ಷಣದ ಕುಟುಂಬ ಮಾತ್ರವಲ್ಲ ಆಳು ಕಾಳು, ಲಂಕೆ, ಕಿಷ್ಕಿಂಧೆ, ಗುಡ್ಡಕಾಡು ಮೊದಲಾದ ರಾಮನೇ ರಾಮಾಯಣದಲ್ಲಿ ಸಂಚರಿಸಿದ ಜಾಗಗಳಲ್ಲದೆ ಆ ಬಳಿಕ ಚರಿತ್ರೆಯಲ್ಲಿ ವರ್ಗೀಕರಣಕ್ಕೆ ಒಳಗಾದ ಆರ್ಯ - ದ್ರಾವಿಡ - ಆದಿವಾಸಿಗಳೂ ಸೇರುತ್ತಾರೆ. ಆ ಇದೇ ಸಂಸಾರ ಇಂದಿನ ರಾಮನ ಪೂಜೆಯಲ್ಲಿ ಪಾಲುಗೊಳ್ಳುತ್ತಾರೆ.

ಅಷ್ಟು ಹೇಳಿಬಿಟ್ಟರೆ ಕವಿಗೆ ಸಾಕಾಗುವುದಿಲ್ಲ. ಅವ ಅಂದಿನ ಚರಿತ್ರೆಯ ರಾಮ ಮಾತ್ರ ಅಲ್ಲ. ಅವ ನನಗೆ ಇಂದಿನ ರಾಮ ಎಂಬುದನ್ನೂ ಪುನರಪಿ ಹೇಳಬೇಕು. ಅದಕ್ಕಾಗಿಯೇ "ವರ್ಗ ವರ್ಣ ವೈಷಮ್ಯ ಲೆಕ್ಕಿಸದೆ ಪೂಜೆಗೊಳ್ಳುತಿದೆ ಸಂಸಾರ" ಎಂದು ಕವಿ ಸಾರುತ್ತಾನೆ.

ಹೀಗಿರುವ ಇಂದಿನ ಸಂಸಾರದಲ್ಲಿ ಸ್ನೇಹ ಮೋಹ ಮಾತ್ರವಲ್ಲ ತಿಕ್ಕಾಟವೂ ಇದೆ. 'ತಿಕ್ಕಾಟ' ಎಂಬ ಪದ ಇಲ್ಲಿ ಸಂಸಾರದ ಶಕ್ತಿ ದೌರ್ಬಲ್ಯ ಎರಡನ್ನೂ ಒಟ್ಟಾಗಿ ಸೂಚಿಸುವ ಪದ. ತಿಕ್ಕಾಟ ಎಂದರೆ ವೈರುಧ್ಯ ಒಂದೇ ಅಲ್ಲ. ಕೌಟುಂಬಿಕ ಗೋಷ್ಠಿ ಪಟದಲ್ಲಿ ಅಂದರೆ ಅವರೆಲ್ಲಾ ಒಂದು ಸಂಸಾರದ ಗ್ರೂಪ್ ಫೋಟೋದ ಫ್ರೇಮ್ (ಚೌಕಟ್ಟು) ಒಳಗೆ ಬರಬೇಕಾದರೆ ಒಬ್ಬರಿಗೊಬ್ಬರು ತಿಕ್ಕಿಕೊಂಡೇ ಹತ್ತಿರ ಒತ್ತಿಕೊಂಡು ನಿಲ್ಲಬೇಕಷ್ಟೆ. ಹಾಗೆ ತಿಕ್ಕಿಕೊಂಡು ನಿಲ್ಲದಿದ್ದಲ್ಲಿ ಅವರು ಕೌಟುಂಬಿಕ ಗೋಷ್ಠಿಪಟದ ಚೌಕಟ್ಟಿನಿಂದ ಹೊರಗೆ ಹೋಗಿ ಬಿಡಬೇಕಾಗುತ್ತದೆ.

ಹೀಗೆ ಮೊದಲ ಆರು ಚರಣಗಳಲ್ಲಿ ಕವನ ರಾಮನ ಕುಟುಂಬದ ಒಂದು ಗೋಷ್ಠಿ ಪಟ (ಗ್ರೂಪ್ ಫೋಟೋ) ತೆಗೆಯಲು ತಯಾರಾಗುತ್ತದೆ. ಇದು ಓದುಗನಾಗಿ ನನ್ನ ಮನೆಯ ಚಾವಡಿಯಲ್ಲಿ ತೂಗು ಹಾಕಲು ನನಗೆ ಬೇಕಾದ ಫೋಟೋ. ಈ ಸಂಸಾರಕ್ಕೆ ಅಳಿಲು ಕೂಡಾ ಸೇರುವುದೇ ಇಲ್ಲಿನ ಕತೆ.

ಕವನದ ಕೊನೆಯ ಚರಣದಲ್ಲಿ ಶ್ರೀರಾಮನ ಸಂಸಾರದ ಪಟ ತೆಗೆಯಲು ಬಿಂಬಗ್ರಾಹಿ ಅಂದರೆ ಫೋಟೋಗ್ರಾಫರ್ ಕೆಮರಾದ ಹಿಂದೆ ಕಪ್ಪು ಮುಸುಕು ಹಾಕಿಕೊಂಡು ತಯಾರಾಗಿದ್ದಾನೆ. ಎಲ್ಲರನ್ನೂ ಫೋಟೋದ ಒಳಗೆ ನಿಲ್ಲಿಸುವ ಚೌಕಟ್ಟಿನ (ಫ್ರೇಮ್‌ನ) ತಯಾರಿಯಲ್ಲಿದ್ದಾನೆ.

ಹೊರಗೆ ಸಾರ್ವಜನಿಕವಾಗಿ ರಾಜಕೀಯದಲ್ಲಿ ರಾಮನ ಚಿತ್ರ ನೋಡಿದ ನನಗೆ ಈಗ ನನ್ನ ಮನೆಯೊಳಗೆ ನನ್ನ ಜಾವಡಿಗೆ, ನನ್ನ ಮನೆ ಪೂಜೆಗೆ ಬೇಕಾಗುವ ಫೋಟೋ ತೆಗೆದುಕೊಡುತ್ತಿದ್ದಾನೆ ಬಿಂಬಗ್ರಾಹಿ. ಹೊರಗೆ ಬಿಲ್ಲು ಬಾಣ ಹಿಡಿದ ಯುದ್ಧ ಸನ್ನದ್ಧ ಒಬ್ಬಂಟಿ ರಾಮನನ್ನು ನೋಡಿದ ನಾನು ನನ್ನ ಮನೆಯೊಳಗಿನ ಬೇಕಾದ ರಾಮನ ಪಾಠವನ್ನು ಪಡೆಯಬೇಕಾಗಿದೆ.

ನನ್ನ ಒಳಗೂ ಇರಬಹುದಾದ ಈ ಬಿಂಬಗ್ರಾಹಿ ಮೆಲ್ಲಗೆ ಮಂದ್ರದಲ್ಲಿ ಗೊಣಗುತ್ತಾನೆ: "ಹೆಗಲ ಬಿಲ್ಲ ಕೆಳಗಿಳಿಸಿರಿ ಸ್ವಾಮಿ, ಜಾಗ ಉಂಟು ಇನ್ನೊಬ್ಬರಿಗೆ !" ರಾಮ ಯುದ್ಧಕ್ಕೆ ಹೊರಟುದು ಲಂಕೆಗೆ. ಅದಕ್ಕೋಸ್ಕರ ಸಮುದ್ರಕ್ಕೆ ಸೇತುವೆ ಕಟ್ಟಿದ್ದು. ಹೊರಗೆ ಯುದ್ಧಕ್ಕೆ ಸನ್ನದ್ಧನಾದ ರಾಮ ಈಗ 'ಸೇತುರಾಮ'ನಾಗುತ್ತಾನೆ. ಕೊಲ್ಲಲು ಹೊರಟ ರಾಮನಲ್ಲಿ ಅಳಿಲ ಬೆನ್ನ ಮೇಲೆ ಕೈಯಾಡಿಸಿದ ಜೀವ ಪ್ರೀತಿಯ ಸ್ನೇಹಮಯಿ ರಾಮ ಕವಿಗೆ ಕಾಣುತ್ತಾನೆ. ಬಿಂಬಗ್ರಾಹಿ ಇನ್ನೊಬ್ಬರಿಗೆ ಸಂಸಾರದೊಳಗೆ ಜಾಗ ಇದೆ. ಬಿಲ್ಲ ಕೆಳಗಿಳಿಸಿರಿ ಸ್ವಾಮಿ ಎಂದಾಗ ರಾಮ ಧ್ಯಾನಿಸಿದ್ದು ಮರಳು ಸೇವೆ ಮಾಡಿದ ಅಳಿಲು ಮರಿಯನ್ನು "ಮರುಕ್ಷಣದಲ್ಲಿ ಅಳಿಲಿದೆ ಆತನ ಹೆಗಲಲ್ಲಿ."

ಇಂದು ಹೊರಗೆ ಸಾರ್ವತ್ರಿಕವಾಗಿ ಹೆಗಲಲ್ಲಿ ಬಿಲ್ಲು ಇರಿಸಿದ ರಾಮನನ್ನು ಒಬ್ಬಂಟಿಯಾಗಿ ನೋಡುತ್ತಿರುವ ನನಗೆ ಕವಿ ಅವನ ಹೆಗಲಿನಿಂದ ಬಿಲ್ಲನ್ನು ಇಳಿಸಿ ಅಲ್ಲಿ ಅಳಿಲನ್ನು ಕೂರಿಸಿ ತೋರಿಸಿದ್ದಾನೆ. ಅಷ್ಟು ಮಾತ್ರವಲ್ಲ ಆ ಅಳಿಲನ್ನೂ ಅವನ ಸಂಸಾರದ ಭಾಗವಾಗಿ ಮಾಡಿದ್ದಾನೆ. ಮನುಷ್ಯ ಮನುಷ್ಯರನ್ನು ಕೊಲ್ಲಲು ಹೊರಟಿರುವ ದ್ವೇಷದ ಸಾರ್ವಜನಿಕ ಜೀವನದ ಕಾಲದಲ್ಲಿ ಸ್ನೇಹದ ಪುಟ್ಟ ಅಳಿಲಿನ ಜೀವವೂ ರಾಮನಿಗೆ ಮುಖ್ಯ ಎಂದು ಕವಿ ತೋರಿಸುತ್ತಿದ್ದಾನೆ. ಹಣ್ಣು ತಿನ್ನುತ್ತ ಹನುಮಂತನಿಗೆ ಎದುರುಗಡೆ ರಾಮನ ಕಾಲ ಬುಡದಲ್ಲಿ ಕುಳಿತಿರುವ ಅಳಿಲು ಇದಲ್ಲ. ಬಿಂಬಗ್ರಾಹಿ ತೆಗೆದ ಇಂದಿನ ಹೊಸ ಚಿತ್ರದಲ್ಲಿ ರಾಮನ ಹೆಗಲಿಂದ ಬಿಲ್ಲು ತೆಗೆದು ಅಲ್ಲಿ ಅಳಿಲನ್ನು ಕೂರಿಸಿ ಕಾಣಿಸುತ್ತಿದ್ದಾರೆ ಕವಿ ಎಚ್.ಎಸ್.ವಿ.

ಹೀಗೆ ವರ್ತಮಾನದ ಸಾರ್ವಜನಿಕ ಮುಖದ ಅನೇಕ ಆವರಣಗಳಿಗೆ ಪ್ರತಿಕ್ರಿಯೆಯಾಗಿ 'ಶ್ರೀ ಸಂಸಾರಿ'ಯನ್ನು ಓದಿದರೆ ಕಾವ್ಯದ ಮಾನದಂಡ ಯಾವುದು? ಹೊರಗಿನ ವರ್ತಮಾನದ ಸ್ವರೂಪ ಬದಲಾದರೆ ಈ ಕವನ ಏನನ್ನು ಹೇಳುತ್ತದೆ ಎಂಬ ಪ್ರಶ್ನೆ ಏಳುತ್ತದೆ.

ಉತ್ತಮ ಕಾವ್ಯದ ಮುಖ್ಯವಾದೊಂದು ಶಕ್ತಿ ಲೋಕ ಸ್ಮೃತಿಯನ್ನು ಬೆಳಗುವುದು. ಭಾಷೆಯೊಳಗೆ ಲೋಕದ ಅನೇಕ ಅನುಭವಗಳು ನಾನಾ ರೀತಿಯಲ್ಲಿ ಹುದುಗಿರುತ್ತವೆ. ಉತ್ತಮನಾದ ಕವಿಯೊಬ್ಬ ಹಾಗೆ ಅಡಗಿ ಕುಳಿತ ನೆನಪಿನ ಒಸರುಗಳನ್ನು ಪುನಃ ದ್ರವಿಸುತ್ತಾನೆ. ಆ ರೀತಿಯಲ್ಲಿ ಈ 'ಶ್ರೀ ಸಂಸಾರಿ' ಮರೆತ, ಮರೆಗೆ ಸರಿದ ಶ್ರೀರಾಮನ ನಾನಾ ನೆನಪುಗಳನ್ನು ಮತ್ತೆ ಕಟ್ಟಿಕೊಡುತ್ತದೆ. ತಂತ್ರಜ್ಞಾನದ ಒಂದು ಉತ್ಪನ್ನವಾದ ಫೋಟೋಗ್ರಫಿ ನಮ್ಮ ಸಂಸ್ಕೃತಿ ಮೇಲೆ ನಾನಾ ರೀತಿಯ ಪ್ರಭಾವ ಬೀರಿದೆ. ಇಂದು ರಾಮನ ಸಂದರ್ಭದಲ್ಲಿ ಪ್ರಚಾರಕ್ಕೂ ಸಾರ್ವಜನಿಕವಾಗಿ ಹೊಸ ಪ್ರಭಾವಕ್ಕೂ ಅದು ಬಳಕೆಯಾಗಿದೆ. ಅಂತಹ ಸಂದರ್ಭದಲ್ಲಿ ಚಿತ್ರಪಟದ ಪ್ರತಿಮೆ ಪ್ರತೀಕಗಳ ಮೂಲಕವೇ ಇಂದಿನ ಅನುಭವಕ್ಕೆ ಹಳೆಯ ನೆನಪುಗಳನ್ನು ಶ್ರೀ ಸಂಸಾರಿ ಸೇರಿಸುತ್ತದೆ. ಲೋಕದ ಸ್ಮೃತಿಗಳನ್ನು ಎತ್ತಿ ಬೆಳಗುತ್ತದೆ.

ಅಡಿಗರ ಕವನ ನಮಗೆ ಚಿತ್ರದ ರಾಮನನ್ನು ಕರುಣಿಸಿದೆ. ಆ ರಾಮ ಚಿತ್ರವಾಗುವುದು ವರ್ತಮಾನದ ಅನಿವಾರ್ಯ ಅನುಭವವಾಗಿದೆ. ಅಮೂರ್ತ, ಸಂಕೀರ್ಣ ಲೋಕ ನಿಯಮದ ರಾಮನನ್ನು ಸಾರ್ವಜನಿಕವಾಗಿ ಯುದ್ಧದ ರಾಮನನ್ನಾಗಿ ನಮ್ಮ ರಾಜಕೀಯ ಕಾಣಿಸಿದೆ. ಆಗ ಆಕ್ರೋಶದ ಎದುರು ನನ್ನ ಭಾವಕ್ಕೊಂದು ಸಂಯಮದ ರೂಪ ನೀಡಲು ಯಾವ ಚಿತ್ರ ಸರಿ ಎಂದಾಗ ಸಂಸಾರಿಯಾಗಿ ಕಂಡಿದ್ದಾನೆ ಶ್ರೀರಾಮ.

ಇಲ್ಲಿ ಓದುಗನ ನೆನಪಲ್ಲಿ ಅಡಿಗರ ಶ್ರೀರಾಮ ಇದ್ದಾನೆ. ಆತ ಸಂಕೀರ್ಣ. ಅಲ್ಲಿ ಅಡಿಗರ ಪ್ರತಿಮೆಗಳು ಅನುಭವದ ಪ್ರತಿರೂಪ. ಆದ್ದರಿಂದ ಸುಲಭ ವ್ಯಾಖ್ಯೆಗೆ ದಕ್ಕುವುದಿಲ್ಲ. ಅನುಭವದ ಸಂಕೀರ್ಣತೆ ತರ್ಕಕ್ಕೆ ಮೀರಿ ಕಾಣಿಸುತ್ತದೆ. ವಿಚಾರದ ಆಚೆಗಿನ ಧ್ಯಾನ ಅಲ್ಲಿನ ನೆಲೆ. ಅಡಿಗರ ಭಾಷೆಗೆ ಅರ್ಥಾನುಸಾರಿ ಲಯ ಹಾಗೂ ಭಾಷೆಯನುಸಾರಿ ಲಯ ಎರಡನ್ನೂ ಸಂಕೀರ್ಣ ಅನುಭವವಾಗಿ ಪ್ರತಿಮೆಗಳಲ್ಲಿ ಕಟ್ಟಿ

ಕಾಣಿಸಬೇಕಾದ ಅನಿವಾರ್ಯತೆ ಇದೆ. ಅಡಿಗರ ಸಾವಯುವ ಶಿಲ್ಪದ ಕಲ್ಪನೆ ಅವರ ಬಿಡಿ ಕವನ, ಒಟ್ಟು ಕಾವ್ಯ ಹಾಗೂ ಕನ್ನಡ ಕಾವ್ಯಲೋಕದೊಳಗೆ ಕಾಣುವ ರೀತಿಯಾಗಿ ಪಡಿ ಮೂಡಿದೆ. ಆ ಮೂರೂ ನೆಲೆಗಳಲ್ಲಿ ಅಡಿಗರ ಶಿಲ್ಪಕ್ಕೊಂದು ಸಾವಯುವ ಸಂಬಂಧ ಇದೆ.

ಆದರೆ ಇಂದು ರಾಮನ ಸಾರ್ವಜನಿಕ ಬಳಕೆಯ ಕ್ರಮ, ರಾಜಕೀಯ ಇಚ್ಛೆ ಬೇಕಾಗಿದೆ. ಆದ್ದರಿಂದ ವಿಚಾರದ ಮೂಲಕ ರಾಮನನ್ನು ಮತ್ತೆ ಪಡೆಯಬೇಕಾದ ಒತ್ತಡ ಉಂಟಾಗಿದೆ. ಹೀಗಾಗಿ ಇಂದಿನ ಕವಿಗೆ ನವ್ಯದಲ್ಲಿ ಬೆಳೆದ ಅರ್ಥಾನುಸಾರಿ ಲಯ ಮುಖ್ಯ ಅನಿಸಬಹುದು. ಅಂತಹ ವಿಚಾರಕ್ಕೆ ಬೇಕಾದಂತೆ ಕವನದಲ್ಲಿ ಪ್ರತಿಮೆಗಳು ಬೆಳೆಯುತ್ತಾ ಅಳಿಲನ್ನು ಕೂಡಾ ರಾಮನ ಸಂಸಾರದ ಪರದೊಳಗೆ ತಂದು ಬಿಡುತ್ತದೆ.

ಒಟ್ಟಲ್ಲಿ ಈ ಕವನ ಓದಿದಾಗ ಅಡಿಗರ 'ಶ್ರೀರಾಮ ನವಮಿಯ ದಿವಸ' ಕವನ ಶ್ರೇಷ್ಠವೋ ಅಥವಾ ಎಚ್.ಎಸ್.ವಿ. ಅವರ 'ಶ್ರೀ ಸಂಸಾರಿ'ಯೋ ಎಂಬ ಪ್ರಶ್ನೆಯೇ ನನಗೆ ಮುಖ್ಯವಾಗಿ ಕಾಣಲಿಲ್ಲ. ಅಡಿಗರ ಕವನ ಎಲ್ಲಾ ಕಾಲಕ್ಕೂ ಸಲ್ಲುವ ಶ್ರೇಷ್ಠ ಕವನಗಳಲ್ಲಿ ಒಂದು ಎಂಬುದು ತಿಳಿದ ವಿಚಾರ. ಆದರೆ 'ಶ್ರೀ ಸಂಸಾರಿ' ರಾಮನನ್ನು ಹೊಸದಾಗಿ ನೋಡಲು ನನ್ನನ್ನು ಪ್ರೇರೇಪಿಸುವಂತೆ ಕಾವ್ಯಾನುಭವವನ್ನೂ ಇಂದು ಹೊಸದಾಗಿ ಪರಿಭಾವಿಸಲು ಪ್ರೇರೇಪಿಸುತ್ತದೆ ಎಂಬುದೇ ಮುಖ್ಯ. ಶ್ರೀ ರಾಮನನ್ನೂ ಆ ಮೂಲಕ ಕಾವ್ಯಾನುಭವವನ್ನೂ 'ಶ್ರೀ ಸಂಸಾರಿ' ಮತ್ತೆ ಹೊಸದಾಗಿ ಕಾಣಿಸುವುದೇ ಈ ಕವನದ ಶಕ್ತಿ. ಸಂಸಾರ, ಸಮಾಜ ವ್ಯಕ್ತಿ ಈ ಮೂರೂ ಸೇರುವ ಬಿಂದು ಯಾವುದೆಂದು ಧ್ಯಾನಿಸುವುದು ಎಚ್.ಎಸ್.ವಿ. ಅವರ ಈಚಿನ ಕಾವ್ಯದ ಶಕ್ತಿ. ವ್ಯಕ್ತಿ ಕೇಂದ್ರಿತ ನವ್ಯ, ಸಮಾಜಕೇಂದ್ರಿತ ಆ ಬಳಿಕದ ಸಾಹಿತ್ಯ ಚಳುವಳಿಗಳು ಹಾಗೂ ಸಂಸಾರ ಕೇಂದ್ರಿತ ರಾಜಕೀಯ ಮತ್ತಿತರ ವ್ಯವಹಾರ ಪ್ರಪಂಚಗಳನ್ನು ಕಂಡಿರುವ ನಮ್ಮ ಕಾಲದಲ್ಲಿ ಸಂಸಾರ, ಸಮಾಜ, ವ್ಯಕ್ತಿ ಈ ಮೂರೂ ಸೇರುವ ಸಹಜ ಜೀವನ ಮೌಲ್ಯದ ಶೋಧನೆ ಮುಖ್ಯವಾದೊಂದು ಕಾವ್ಯಾನುಭವವೂ ಆಗಬಲ್ಲುದು.



# ಮಹತ್ವದ ಕವಿ ಎಚ್.ಎಸ್. ವೆಂಕಟೇಶಮೂರ್ತಿ

*- ಬಿ.ವಿ. ಕೆದಿಲಾಯ*

ಡಾ. ಎಸ್. ವೆಂಕಟೇಶ ಮೂರ್ತಿ ಅಡಿಗೋತ್ತರ ಕವಿಗಳಲ್ಲಿ ಬಹು ದೊಡ್ಡ ಹೆಸರು. ಕಳೆದ 40 ವರ್ಷಗಳಿಂದ ಅವ್ಯಾಹತವಾಗಿ, ಅಸಾಧಾರಣವಾದ ರೀತಿಯಲ್ಲಿ ಸಾಹಿತ್ಯ ಸಾಧನೆ ಮಾಡುತ್ತ ಬಂದಿರುವ ಅವರು 300ಕ್ಕೂ ಹೆಚ್ಚು ಕವನಗಳನ್ನಲ್ಲದೆ, ಸಣ್ಣಕತೆ, ಕಾದಂಬರಿ, ನಾಟಕ, ವಿಮರ್ಶೆ, ವೈಚಾರಿಕ ಲೇಖನಗಳು, ಪ್ರವಾಸಕಥನ, ಸಾಹಿತ್ಯ ಚರಿತ್ರೆ, ಖಂಡಕಾವ್ಯ, ಅನುವಾದ, ಮಕ್ಕಳ ಸಾಹಿತ್ಯ ಮುಂತಾದ ವೈವಿಧ್ಯಮಯ ಪ್ರಕಾರಗಳಲ್ಲಿ ಸತ್ವಪೂರ್ಣವೂ, ಸ್ವಾರಸ್ಯಕರವೂ, ಸ್ವೋಪಜ್ಞವೂ ಆದ ಕೃತಿಗಳನ್ನು ನೀಡಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ 5 ಬಾರಿ ರಾಜ್ಯ ಅಕಾಡೆಮಿ ಪ್ರಶಸ್ತಿಯನ್ನೂ, ಇನ್ನೂ ಅನೇಕ ಪ್ರಶಸ್ತಿಗಳನ್ನೂ ಪಡೆದಿರುವ ಅವರ ಕೃತಿಗಳು ಮುಗ್ಧ ಮಕ್ಕಳಿಂದ ಹಿಡಿದು ಪ್ರಬುದ್ಧ ವಿದ್ವಾಂಸರವರೆಗೆ ವಿಸ್ತಾರವಾದ ಓದುಗರ ಬಳಗದ ಮೆಚ್ಚುಗೆಗೆ ಪಾತ್ರವಾಗಿವೆ. ಪ್ರಾಚೀನ ಸಾಹಿತ್ಯದಿಂದ ಹಿಡಿದು, ಆಧುನಿಕ ಕನ್ನಡದ ಕುವೆಂಪು, ಬೇಂದ್ರೆ, ಪು.ತಿ.ನ. ಕೆ.ಎಸ್.ನ. ಅಡಿಗ ಮುಂತಾದ ಮಹಾಕವಿಗಳ ಸತ್ವವನ್ನು ಹೀರಿಕೊಂಡು, ತನ್ನದೇ ಆದ ವಿಶಿಷ್ಟ ಅಭಿವ್ಯಕ್ತಿ ಕ್ರಮವನ್ನು ರೂಪಿಸಿಕೊಂಡು ಪರಂಪರೆ-ಆಧುನಿಕತೆಗಳ ಸಮನ್ವಯಕ್ಕೆ ಮಾದರಿಯಾಗಿದ್ದಾರೆ. ಅನಂತಮೂರ್ತಿ ಹೇಳುವಂತೆ' ಬಾಲ್ಯದ ಬೆರಗು, ಯೌವನದ ಜೀವನಪ್ರೀತಿ, ತಿಳಿಹಾಸ್ಯ, ಸುಖ ದುಃಖಗಳನ್ನು ಕಂಡ ಪರಿಪಕ್ವ ಸಂಸಾರಿಯ ವಿನಯ ಇವು ವೆಂಕಟೇಶಮೂರ್ತಿಯವರನ್ನು ನಮ್ಮ ಕಾಲದ ಮುಖ್ಯ ಲೇಖಕರಲ್ಲಿ ಒಬ್ಬರನ್ನಾಗಿ ಮಾಡಿದೆ. ಸಮೃದ್ಧವಾಗಿ ಪ್ರೌಢಕಾವ್ಯವನ್ನು ಸೃಷ್ಟಿಸಿದರೂ, ಅಷ್ಟೇ ಶ್ರದ್ಧೆ ಕೌಶಲ್ಯಗಳಿಂದ ಮಕ್ಕಳ ಸಾಹಿತ್ಯವನ್ನೂ ರಚಿಸಿರುವುದು, ಕಥನ ಕವನಗಳಿಗೆ, ಕೌಟುಂಬಿಕತೆಯ ಕವನಗಳಿಗೆ ಪುನರುತ್ಥಾನ ನೀಡಿದುದು ಎಚ್.ಎಸ್. ವಿ.ಯವರ ಕೃತಿ ಶ್ರೇಣಿಯಲ್ಲಿ ಕಂಡು ಬರುವ ಹೆಚ್ಚುಗಾರಿಕೆ. ಹೀಗೆ ಬದುಕಿನ ಸಮಗ್ರಾನುಭವವನ್ನು ತಮ್ಮ ಕಾವ್ಯದಲ್ಲಿ ಇಷ್ಟು ವಿಪುಲವಾಗಿ ಅಭಿವ್ಯಕ್ತಿಪಡಿಸಿದ ಕವಿಗಳು ವಿರಳ. ಹೀಗಾಗಿ ಅವರು ಇಂದು ಬರೆಯುತ್ತಿರುವ ಮಹತ್ವದ ಕವಿಗಳಲ್ಲಿ ಅಗ್ರಗಣ್ಯರಾಗಿದ್ದಾರೆ.

ಎಚ್.ಎಸ್.ವಿ.ಯವರು ಎಲ್ಲ ಮಹತ್ವದ ಕವಿಗಳಂತೆ ತಮ್ಮದೇ ಆದ ವಿಶಿಷ್ಟ ಕಾವ್ಯ ಭಾಷೆಯನ್ನೂ ರೂಪಿಸಿಕೊಂಡವರು. ಮೈಸೂರು ಕನ್ನಡದ ಮೃದುತ್ವ,

ಲಾಲಿತ್ಯಗಳನ್ನು ಅವರು ತಮ್ಮ ಕಾವ್ಯೋದ್ದೇಶಕ್ಕೆ ಬೇಕಾದಂತೆ ಪಳಗಿಸಿಕೊಂಡ ರೀತಿ ವೈಶಿಷ್ಟ್ಯಪೂರ್ಣವಾದುದು. ಸರಳವಾದ, ಸಲೀಸಾದ ಭಾಷೆಯಲ್ಲಿಯೇ ಗಹನವಾದ, ಸಂಕೀರ್ಣವಾದ ಭಾವಗಳನ್ನೂ ಅನುಭವಗಳನ್ನೂ ಅಭಿವ್ಯಕ್ತಿಸುವ ಕೌಶಲ ಅವರಿಗೆ ಸಿದ್ಧಿಸಿದೆ. ಇನ್ನೊಂದು ವಿಶೇಷವೆಂದರೆ ಅವರ ಆರಂಭದ ಕವನಗಳೂ ಪ್ರೌಢವಾಗಿಯೇ ಇರುವುದು. ಈ ಪ್ರೌಢತೆ ದುರೂಹ್ಯವಾಗದೆ ಬೆಳೆಯುತ್ತ ಹೋಗುವುದು. 'ಉತ್ತರಾಯಣ ಮತ್ತು ಮುಂತಾದ ಕವನಗಳಲ್ಲಿ ಇದು ಅತ್ಯುನ್ನತಿಯನ್ನು ತಲುಪಿದೆ ಎಂದು ಹೇಳಬಹುದು.

ರಾಮಾಯಣ, ಮಹಾಭಾರತ, ಭಾಗವತಗಳ ಪ್ರಸಂಗಗಳನ್ನು ಸಮಕಾಲೀನ ವಿದ್ಯಮಾನಗಳ ಅನುಭವಗಳ ಧ್ವನಿಯೊಂದಿಗೆ ಸಾಮರಸ್ಯಗೊಳಿಸಿ ಪುನಃ ಸೃಷ್ಟಿಸುವುದರಲ್ಲಿಯೂ ಎಚ್ಚೆಸ್ವಿಯವರು ವಿಶಿಷ್ಟವಾದ ಕಾವ್ಯ ಕೌಶಲವನ್ನು ಮೆರೆಯುತ್ತಾರೆ. 'ಅಮೇರಿಕಾದಲ್ಲಿ ಬಿಲ್ಲ ಹಬ್ಬ' ಇದಕ್ಕೊಂದು ಸೊಗಸಾದ ಉದಾಹರಣೆ. ಹಳ್ಳಿಯ ಹುಡುಗರಾಗಿದ್ದ ಕೃಷ್ಣ ಬಲರಾಯರು ಮಥುರೆಯ ನಗರಕ್ಕೆ ಹೋಗಿ ಹಾಗೆಯೇ ಮುಂದುವರಿಯುವ ಬದುಕಿನ ಪರಿ ಅಮೇರಿಕ ಮುಖಿಯಾಗಿರುವ ಇಂದಿನ ಪೀಳಿಗೆಯ ಯುವಜನರ ವರ್ತನೆ ಯೋಚನೆಗಳನ್ನು ಒಳಗೊಳ್ಳುತ್ತದೆ.

1944ರಲ್ಲಿ ದಾವಣಗೆರೆ ಜಿಲ್ಲೆಯ ಹೋದಿಗೆರೆಯಲ್ಲಿ ಜನಿಸಿದ ಎಚ್‌ಎಸ್‌ವಿಯವರು 1973ರಲ್ಲಿ ಬೆಂಗಳೂರಿನ ಸೇಂಟ್ ಜೋಸೆಫ್ ವಾಣಿಜ್ಯ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನೇಮಕಗೊಂಡು, 2000ರಲ್ಲಿ ನಿವೃತ್ತರಾಗಿ ಬೆಂಗಳೂರಿನಲ್ಲೇ ನೆಲಸಿದ್ದಾರೆ. ಬಾಲ್ಯದಿಂದಲೂ ಕುಮಾರವ್ಯಾಸ, ಲಕ್ಷ್ಮೀಶ, ಪುರಂದರ ಮೊದಲಾದವರ ಕೃತಿಗಳ ನಿಕಟ ಸಂಪರ್ಕ, ಮುಂದೆ ಕನ್ನಡ, ಸಂಸ್ಕೃತ, ಇಂಗ್ಲಿಷ್ ಸಾಹಿತ್ಯ ಪರಂಪರೆಯೊಡನೆ ನಡೆಸಿದ ನಿರಂತರ ಅನುಸಂಧಾನ ಇವು ಅವರ ಭಾವಕೋಶ ಮತ್ತು ಕಾವ್ಯ ವ್ಯಕ್ತಿತ್ವವನ್ನು ರೂಪಿಸಿವೆ. ಹೀಗಾಗಿ ಇವರ ಬರಹಗಳಲ್ಲಿ ಪರಂಪರೆ-ಆಧುನಿಕತೆಗಳ ಹೊಕ್ಕಾಟ ಮತ್ತು ಸಂಘರ್ಷಗಳನ್ನು ಕಾಣಬಹುದು. ಗಂಭೀರ ಕಾವ್ಯ ಪ್ರಿಯರಿಗೆ ಇಷ್ಟವಾಗುವ ನೂರಾರು ಚಿಂತನ ಶೀಲ ಕವನಗಳನ್ನು ಬರೆದಿರುವ ಇವರು ಸಾಮಾನ್ಯರ ಮನಸ್ಸನ್ನೂ ತಟ್ಟುವ (ಉದಾ : ಅನೇಕ ಸೊಗಸಾದ ಪದ್ಯಗಳನ್ನೂ ಬರೆದಿದ್ದಾರೆ. ಚಲನಚಿತ್ರ, ದೂರದರ್ಶನ, ಧ್ವನಿಸುರುಳಿಗಳಲ್ಲೂ ಇವರ ವಿವಿಧ ರಚನೆಗಳು ಜನಪ್ರಿಯವಾಗಿವೆ.

ಜಗತ್ತನ್ನೇ ಆಪೋಶನ ಮಾಡ ಹೊರಟಿರುವ, ಭೂವ್ಯೋಮ ವ್ಯಾಪಿಯಾಗಿರುವ ಜಾಗತೀಕರಣದ ಕಬಂಧ ಪ್ರವೃತ್ತಿಯನ್ನು ಎದುರಿಸಬೇಕಾದ ತಾತ್ವಿಕ ಮಾದರಿಗಳನ್ನು ಅನ್ವೇಷಿಸುವ ವಿಶ್ವಾತ್ಮಕ ಚಿಂತನೆ'ಯಲ್ಲಿ ಮಗ್ನರಾಗಿರುವ ಕವಿ ಎಚ್ಎಸ್‌ವಿ ಸದ್ಯ ಭಗವಾನ್ ಬುದ್ಧನ ಜೀವನದ ಕುರಿತ ಮಹಾಕಾವ್ಯವೊಂದನ್ನು ರಚಿಸುವ ತಪಸ್ಸಿನಲ್ಲಿ ನಿರತರಾಗಿದ್ದಾರೆ. ಅವರ ಮಹತ್ವಾಕಾಂಕ್ಷೆಯ ಕೃತಿ ಸಕಾಲದಲ್ಲಿ ಪೂರ್ಣಗೊಂಡು, ಪ್ರಕಟವಾಗಿ ಕನ್ನಡ ಸಾಹಿತ್ಯ ಲೋಕವನ್ನು ಇನ್ನಷ್ಟು ಶ್ರೀಮಂತಗೊಳಿಸಲಿ ಎಂದೂ ಅದು ಜನರಲ್ಲಿ ಕಾವ್ಯಪ್ರಿಯತೆಯನ್ನು ಇನ್ನಷ್ಟು ಬೆಳೆಸುವಂತಾಗಲಿ ಎಂದೂ ಆಶಿಸೋಣ.



ಡಾ. ಎಚ್.ಎಸ್. ವೆಂಕಟೇಶಮೂರ್ತಿಯರ 'ಹಕ್ಕಿ ಸಾಲು' ಮಕ್ಕಳ ಸಾಹಿತ್ಯಕ್ಕೆ ಹೊಸದಿಗಂತವೊಂದನ್ನು ತೆರೆದಿದೆ.

ಮಕ್ಕಳ ಮನಸ್ಸಿನ ಹೊಲಬುಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಅವರ ಮಾನಸಿಕ ಇತಿಮಿತಿಗಳನ್ನು ತಿಳಿದುಕೊಂಡು ಅಂತರಂಗದ ಭಾವಗುಣ ಗೀತಗುಣವನ್ನು ತೃಪ್ತಿಪಡಿಸುತ್ತಾ, ಅವರ ಕುತೂಹಲವನ್ನು ತಣಿಸುವಲ್ಲಿ ಈ ಕವನಗಳದ್ದು ಹಿರಿಮೆಯ ಸಾಧನೆ. ಮಕ್ಕಳ ಮಾನಸಿಕ ಬೆಳವಣಿಗೆಯಲ್ಲಿ ಆಸಕ್ತಿಯುಳ್ಳ ಹೊಸಲೇಖಕರಿಗೆ ವೆಂಕಟೇಶಮೂರ್ತಿ ಹೊಸ ಮಾದರಿಯನ್ನೊದಗಿಸಿ ಅಭಿನಂದನೆಗೆ ಪಾತ್ರರಾಗಿದ್ದಾರೆ.

**- ಚೆನ್ನವೀರ ಕಣವಿ**

ವೆಂಕಟೇಶಮೂರ್ತಿಯವರ ಕವಿತೆಗಳು ಎತ್ತಿಕೊಂಡಿರುವ ಪ್ರಶ್ನೆ ದೊಡ್ಡದು. ಆಶಯ ದೊಡ್ಡದು. ಅಭಿವ್ಯಕ್ತಿ ಎಲ್ಲಕ್ಕಿಂತ ದೊಡ್ಡದು. ಕಾವ್ಯವೆಂದರೆ ಏನು ಎಂದು ಮತ್ತೆ ಆಲೋಚಿಸಲು ಹಚ್ಚುವ ಕಾವ್ಯ ನಿಜವಾಗಿಯೂ ದೊಡ್ಡ ಕಾವ್ಯವೆಂದು ನಾನು ತಿಳಿದಿದ್ದೇನೆ. ಅಂಥ ಕವಿತೆಯನ್ನು ನಿರ್ಮಿಸಿದ್ದಕ್ಕಾಗಿ ವೆಂಕಟೇಶಮೂರ್ತಿಯವರನ್ನು ಅಭಿನಂದಿಸುತ್ತೇನೆ.

**- ಕೀರ್ತಿನಾಥ ಕುರ್ತಕೋಟಿ**

ಇತ್ತೀಚಿನ ಕೆಲವು ಪ್ರಶಸ್ತಿ ವಿಜೇತರ ಕುರಿತು.....

# ವೈದೇಹಿ ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಗೌರವ

ಕನ್ನಡದ ಮಹತ್ವದ ಲೇಖಕಿಯರಲ್ಲೊಬ್ಬರಾಗಿರುವ ಶ್ರೀಮತಿ ವೈದೇಹಿ ಅವರಿಗೆ ಈ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿರುವುದು ಒಂದು ಸಂತೋಷದ ಸಂಗತಿ. ಅವರ 'ಕ್ರೌಂಚಪಕ್ಷಿಗಳು' ಎಂಬ ಕಥಾ ಸಂಕಲನಕ್ಕೆ ಈ ಪ್ರತಿಷ್ಠಿತ ಪ್ರಶಸ್ತಿ ದೊರೆತಿದೆ.

ಉಡುಪಿ ಜಿಲ್ಲೆಯ ಕುಂದಾಪುರದಲ್ಲಿ ಹುಟ್ಟಿ ಬೆಳೆದ ವೈದೇಹಿ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬದಿಂದ ಬಂದವರಾದರೂ, ಅವರ ಅನುಭವ ಪ್ರಪಂಚ ತುಂಬಾ ವಿಶಾಲವಾದುದು. ಹಿಂದೂ ಸಮಾಜದ ವಿವಿಧ ಜಾತಿಗಳಲ್ಲದೆ, ಸ್ಥಳೀಯ ಮುಸಲ್ಮಾನ, ಕ್ರೈಸ್ತ ಸಮಾಜಗಳ ಜನರ ಜೀವನದ ಸೂಕ್ಷ್ಮ ಸನ್ನಿವೇಶಗಳನ್ನು ಸಮಾಜಗಳ ಜನರ ಜೀವನದ ಸೂಕ್ಷ್ಮ ಸನ್ನಿವೇಶಗಳನ್ನು ವಿಶಿಷ್ಟವಾದ ಕುಂದಗನ್ನಡ ಭಾಷೆಯ ಸೊಗಡಿನೊಂದಿಗೆ ಅವರು ಅತ್ಯಂತ ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾರೆ.

ಅವರ ಬಹುತೇಕ ಕತೆಗಳು ಸ್ತ್ರೀ ಕೇಂದ್ರಿತವಾಗಿದ್ದರೂ ಅವು ಅಪಾರ ವೈವಿಧ್ಯದಿಂದ ಕೂಡಿವೆ. ಮಾಮೂಲಿ ಸ್ತ್ರೀವಾದಿ ಕತೆಗಳಂತೆ ಪುರುಷ ವಿರೋಧಿ ತೀರ್ಮಾನಗಳನ್ನು ಸಾರಾಸಗಟಾಗಿ ನೀಡುವ ಸರಳೀಕೃತ ಧೋರಣೆಗೆ ಬಲಿಯಾಗದೆ ಮನುಷ್ಯ ಸ್ವಭಾವ ಸಂಬಂಧಗಳ ಹಾಗೂ ಸಾಮಾಜಿಕ ಸ್ಥಿತ್ಯಂತರಗಳ ಸಂಕೀರ್ಣತೆ ಮತ್ತು ಸೂಕ್ಷ್ಮತೆಗಳನ್ನು ವ್ಯಕ್ತಪಡಿಸುವುದರಲ್ಲಿ ಯಶಸ್ವಿಯಾಗಿವೆ. ಅಬ್ಬರ, ಆವೇಶ, ಆಕ್ರೋಶಗಳಿಲ್ಲದೆ, ಮೆಲುದನಿಯಲ್ಲೇ ಅವರ ಕೃತಿಗಳು ಬದುಕಿನ ಹೋರಾಟಗಳನ್ನೂ, ನೋವು ನಲಿವುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಕಳೆದ 40 ವರ್ಷಗಳ ನಿರಂತರ ಸಾಹಿತ್ಯ ಸೃಷ್ಟಿಯಲ್ಲಿ ಬೆಳೆಯುತ್ತಾ, ಮಾಗುತ್ತಾ ಎತ್ತರಕ್ಕೆ ಏರಿದ್ದಾರೆ. ಅವರ "ಗುಲಾಬಿ ಟಾಕೀಸು", "ಅಕ್ಕು". "ಅಮ್ಮಚ್ಚಿಯೆಂಬ ನೆನಪು"; "ಅವಲಂಬಿತರು" "ಮರೆವು" "ಕ್ರೌಂಚಪಕ್ಷಿಗಳು" "ಮಾತು ಸೋತಕ್ಷಣ" "ದಾಳ" "ಪ್ರಶ್ನೆ" "ಒಗಟು" ಮುಂತಾದ ಕತೆಗಳನ್ನು ಇಲ್ಲಿ ಉದಾಹರಿಸಬಹುದು.

ಓದುಗರ ಮೆಚ್ಚುಗೆಯನ್ನು, ವಿಮರ್ಶಕರ ಮನ್ನಣೆಯನ್ನೂ, ಅತ್ತಿಮಬ್ಬೆ ಪ್ರಶಸ್ತಿ ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳನ್ನೂ ಮುಡಿಗೇರಿಸಿಕೊಂಡಿರುವ 'ವೈದೇಹಿ' ಅವರಿಗೆ ಅಕಾಡೆಮಿ ಪ್ರಶಸ್ತಿ ದೊರೆತ ಸಂದರ್ಭದಲ್ಲಿ ಹಾರ್ದಿಕ ಅಭಿನಂದನೆಗಳು.

## ಜಯಂತ ಕಾಯ್ಕಿಣಿಗೆ ಮಹಾರಾಷ್ಟ್ರದ ಸಾಹಿತ್ಯ ಪ್ರಶಸ್ತಿ

ಕನ್ನಡದ ಖ್ಯಾತ ಕವಿ ಮತ್ತು ಕತೆಗಾರ ಜಯಂತ ಕಾಯ್ಕಿಣಿಯವರಿಗೆ ಮಹಾರಾಷ್ಟ್ರ ಮುಕ್ತ ವಿಶ್ವವಿದ್ಯಾಲಯ ಮತ್ತು ನಾಸಿಕದ ಯಶವಂತ್‌ರಾವ್ ಚವಾಣ್ ಪ್ರತಿಷ್ಠಾನ ನೀಡುವ ಈ ಪ್ರಪ್ರಥಮ ಕುಸುಮಾಗ್ರಜ ಪ್ರಶಸ್ತಿ (ರೂ. ಒಂದು ಲಕ್ಷ) ಸಂದಿರುವುದು ಕನ್ನಡಿಗರಿಗೆಲ್ಲ ಅತ್ಯಂತ ಸಂತೋಷದ ಸಂಗತಿಯಾಗಿದೆ.

ತಮ್ಮ 19ನೇ ವಯಸ್ಸಿನಲ್ಲೇ (1974) ಪ್ರಥಮ ಕವನ ಸಂಕಲನಕ್ಕೆ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದದ್ದಲ್ಲದೆ, ಬಳಿಕ 1982, 1989, 1996 ರಲ್ಲೂ ಮತ್ತೆ ಅಕಾಡೆಮಿ ಪ್ರಶಸ್ತಿಗೆ ಪಾತ್ರರಾಗಿದ್ದರು.

ಮುಂಬಯಿಯಲ್ಲಿ 23 ವರ್ಷ ಕಳೆದಿದ್ದ ಜಯಂತ್ ಅಲ್ಲಿನ ಜೀವನದ ಅನುಭವಗಳನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡು ಕನ್ನಡದ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಚಲನಚಿತ್ರಗೀತೆ ರಚನಾಕಾರರಾಗಿಯೂ ಚಿತ್ರಗೀತೆಗಳಿಗೆ ಹೊಸ ಆಯಾಮ ನೀಡಿ ಕನ್ನಡ ಜನರ ಮನೆಮಾತಾಗಿದ್ದಾರೆ. ಜಯಂತರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

## ವೀರಪ್ಪ ಮೊಯಿಲಿ ಅವರಿಗೆ ಮೂರ್ತಿದೇವಿ ಪ್ರಶಸ್ತಿ

ಕೇಂದ್ರ ಕಾನೂನು ಸಚಿವ ಶ್ರೀ ಎಂ. ವೀರಪ್ಪ ಮೊಯಿಲಿ ಅವರಿಗೆ ಭಾರತೀಯ ಜ್ಞಾನಪೀಠ ಪ್ರತಿಷ್ಠಾನ ನೀಡುವ ಪ್ರತಿಷ್ಠಿತ ಮೂರ್ತಿದೇವಿ ಪ್ರಶಸ್ತಿ ಲಭಿಸಿದೆ. ಮೊಯಿಲಿ ಅವರು ಬರೆದಿರುವ 'ರಾಮಾಯಣ ಮಹಾನ್ವೇಷಣಂ' ಮಹಾ ಕಾವ್ಯಕ್ಕೆ ಈ ಪ್ರತಿಷ್ಠಿತ ಪ್ರಶಸ್ತಿ ದೊರೆತಿದೆ. ಮೊಯಿಲಿ ಅವರು ಕೆಲವು ಕಾದಂಬರಿಗಳನ್ನೂ, ಕವನ ಸಂಗ್ರಹಗಳನ್ನೂ, ನಾಟಕಗಳನ್ನೂ ನೀಡಿದ್ದಾರೆ. 1983ರಲ್ಲಿ ಕನ್ನಡಿಗ ಸಿ.ಕೆ. ನಾಗರಾಜ ರಾವ್ ಅವರು ಈ ಪ್ರಶಸ್ತಿಗೆ ಪಾತ್ರರಾಗಿದ್ದರು. 27 ವರ್ಷಗಳ ನಂತರ ಮತ್ತೆ ಕನ್ನಡಿಗರೊಬ್ಬರು ಮೂರ್ತಿದೇವಿ ಪ್ರಶಸ್ತಿಗೆ ಪಾತ್ರರಾಗುತ್ತಿದ್ದಾರೆ. ದೇಶದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿ ನೀಡುವ ಸಮಿತಿಯೇ ಮೂರ್ತಿದೇವಿ ಪ್ರಶಸ್ತಿಯನ್ನೂ ನೀಡುತ್ತಿದೆ. ಮೊಯಿಲಿಯವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

# ವೀರಪ್ಪ ಮೊಯಿಲಿಯವರು ಚಿತ್ರಿಸಿದ ವಾಲಿ ಪ್ರಸಂಗ

- ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ

ವಾಲ್ಮೀಕಿ ರಾಮಾಯಣದಲ್ಲಿ ವಾಲಿವಧೆಯ ಪ್ರಸಂಗವು ಬಹಳ ಚರ್ಚಾಸ್ಪದವಾದ ಘಟ್ಟ. ಈ ವಿಷಯದಲ್ಲಿ ಅನೇಕ ಪಂಡಿತರೂ ಬುದ್ಧಿಜೀವಿಗಳೂ ಬಹಳವಾಗಿ ಚರ್ಚಿಸಿದ್ದಾರೆ.

ಆಧುನಿಕ ಯುಗದ ಸಹೃದಯ ವೃಂದಕ್ಕೆ ನವಚಿಂತನೆಯ ದೃಷ್ಟಾರ ಮೊಯಿಲಿಯವರ ರಾಮಾಯಣ ಮಹಾನ್ವೇಷಣೆಯಲ್ಲಿ ಮೂಡಿಬಂದ ವಾಲಿ-ಸುಗ್ರೀವ ಸಹೋದರರ ಪಾತ್ರದಲ್ಲಿ ಒಂದು ವಿಶಿಷ್ಟತೆಯಿದೆ.

ವಾಲಿ, ಸುಗ್ರೀವ ಈ ಅಣ್ಣತಮ್ಮಂದಿರಲ್ಲಿ ಯಾವ ಭೇದ ಭಾವವೂ ಇರಲಿಲ್ಲ. ಬಾಲ್ಯದಲ್ಲಿ ಆಟವಾಡುವಾಗ ಸುಗ್ರೀವ ಸೋತು ಅಳುತ್ತಿರಲು ವಾಲಿ ಮತ್ತೆ ಆಟವಾಡಿ ತಾನೇ ಸೋತಂತೆ ನಟಿಸಿ ತಮ್ಮನನ್ನು ಸಮಾಧಾನ ಪಡಿಸುತ್ತಿದ್ದನಂತೆ ಬೆಳೆಬೆಳೆದಂತೆ ವಾಲಿಯ ಪ್ರತಿಯೊಂದು ಕಾರ್ಯದಲ್ಲೂ ಸುಗ್ರೀವ ಅಣ್ಣನಿಗೆ ಬೆಂಬಲವಿತ್ತು ನೆರವಾಗುತ್ತಿದ್ದನಂತೆ.

ಕಿಷ್ಕಿಂಧೆ ಬಲಿಷ್ಠರಾಜ್ಯವಾಗಿತ್ತು. ಅಣ್ಣನ ಹಿರಿತನದ ಮರ್ಯಾದೆಗೆ ತಮ್ಮನಿಂದ ಯಾವ ಕುಂದೂ ಇಲ್ಲದೆ ಸಮರ್ಥರಾಗಿ ರಾಜ್ಯವಾಳುತ್ತಿದ್ದರು. ಹೀಗಿರುವಾಗ ಇದ್ದಕ್ಕಿದ್ದಂತೆ ದುಂದುಭಿಯ ಮಗ ಮಾಯಾವಿ ವಾಲಿಯನ್ನು ಕೆಣಕಿದಾಗ ವಾಲಿ ಯುದ್ಧಕ್ಕೆ ಹೊರಟ. ಅವನನ್ನು ಸುಗ್ರೀವನೂ ಹಿಂಬಾಲಿಸಿದ. ಮಾಯಾವಿ ಗುಹೆಯನ್ನು ಹೊಕ್ಕಾಗ ವಾಲಿಯೇ ತಮ್ಮನನ್ನು ಕುರಿತು "ಗುಹೆಯೊಳಗೆ ಯುದ್ಧ ಮಾಡುವ ಕಲೆಯನ್ನು ನೀನರಿಯೆ ನಾನೇ ನುಗ್ಗುತ್ತೇನೆ ನಾನು ಯುದ್ಧಮಾಡಬಲ್ಲೆ. ನೀನು ಗುಹೆಯ ಬಾಗಿಲನ್ನು ಕಾಯುತ್ತಿರು. ಒಂದು ಪಕ್ಷ ನಾನು ಹಿಂತಿರುಗಿ ಬಾರದಿದ್ದರೆ ನಾನು ಮೃತನಾದೆನೆಂದು ತಿಳಿ. ನೀನೇ ನನ್ನ ರಾಜ್ಯವನ್ನು ನೋಡಿಕೋ" ಎಂದು ಹೇಳಿದ. ಈರೆರಡು ಮಾಸವಾದರೂ ವಾಲಿ ಹಿಂತಿರುಗಲಿಲ್ಲ. ರಾಜ್ಯ ಅನಾಯಕವಾಗಿರಲು ಮಂತ್ರಿ, ಮಾಂಡಲೀಕರಿಗೆ ಧರ್ಮಸಂಕಟವಾಯಿತು. ಏಕೆಂದರೆ ಪ್ರಜೆಗಳು ದಂಗೆ ಏಳಬಹುದು. ಅಥವಾ ಪರರಾಜರು ಆಕ್ರಮಣ ಮಾಡಬಹುದು. ಎಲ್ಲವನ್ನೂ ಗಮನಿಸಿ

ಮಂತ್ರಿ, ಮಾಂಡಲಿಕರು ಗುಹೆಯ ಬಾಗಿಲಿಗೆ ಹೆಬ್ಬಂಡೆಯನ್ನು ಮುಚ್ಚಿ ಸುಗ್ರೀವನನ್ನು ಹಿಂದಕ್ಕೆ ಕರೆತಂದರು. ಆದರೆ ವಾಲಿಯನ್ನು ಕಾಣದ ಸುಗ್ರೀವನಿಗೆ ತನ್ನ ಎದೆಗೇ ಕಲ್ಲುಬಂಡೆಯನ್ನು ಮುಚ್ಚಿದಂತಾಯಿತಂತೆ. ಹಿಂತಿರುಗಿ ಬಂದ ಸುಗ್ರೀವನು ರಾಜ್ಯದಲ್ಲಿ ತಂದ ಸುಧಾರಣೆಗಳನ್ನು ವಿವರಿಸುವ ಸಂದರ್ಭದಲ್ಲಿ ಮಾನ್ಯ ವೀರಪ್ಪ ಮೊಯಿಲಿಯವರು ಸರಿಯಾದ ಒಡೆಯನಿಲ್ಲದಿದ್ದರೆ ರಾಜ್ಯದಲ್ಲಿ ಅರಾಜಕತೆಯ ನೃತ್ಯ ಹೇಗೆ ತಾಂಡವವಾಡುವುದೆಂಬುದನ್ನೂ ಸರಿಯಾದ ನಾಯಕನು ಬಂದಾಗ ಯಾವ ಯಾವ ಮಾರ್ಪಾಡುಗಳನ್ನು ತರಬಹುದೆಂಬುದನ್ನೂ ತಮ್ಮ ಅನುಭವದ ಅಂಗಳದಿಂದ ಆಯ್ದು ತುಂಬಿದ್ದಾರೆ. ಹೀಗಿರಲು ಇದ್ದಕ್ಕಿದ್ದಂತೆ ವಾಲಿ ಗುಹೆಯ ಬಾಗಿಲನ್ನು ಮುಚ್ಚಿದ್ದ ಬಂಡೆಯನ್ನು ಕಷ್ಟಪಟ್ಟು ತಳ್ಳಿ ತನ್ನ ಅರಮನೆಗೆ ಬಂದು ನೋಡುವಲ್ಲಿ ಸುಗ್ರೀವನು ತನ್ನ ಅತ್ತಿಗೆಯೊಡನೆ ಯಾವುದೋ ರಾಜಕೀಯ ವಿಷಯವನ್ನು ಚರ್ಚಿಸುತ್ತಿದ್ದನು. ಇದನ್ನು ನೋಡಿ ವಾಲಿ ಪೂರ್ವಾಪರ ವಿಚಾರವಿಲ್ಲದೆ ತಮ್ಮನ ಮೇಲೆ ಕೋಪಿಷ್ಠನಾಗಿ ಕೆಂಡವನ್ನು ಕಾರಿದ ತಮ್ಮನೊಡನೆ ದ್ವೇಷವನ್ನು ಬೆಳಸಿದ. ಅದೇ ಅವನ ವಧೆಗೆ ಕಾರಣವಾಯಿತು.

ಸೀತಾಪಹರಣವಾದ ನಂತರ ರಾಮ ಲಕ್ಷ್ಮಣರು ಸೀತಾನ್ವೇಷಣೆಯ ಕಾರ್ಯದಲ್ಲಿ ಸುಗ್ರೀವನ ಸ್ನೇಹವನ್ನು ಬಯಸಿದರು. ರಾಮ ಸುಗ್ರೀವರಿಬ್ಬರೂ ಅಗ್ನಿಸಾಕ್ಷಿಯಾಗಿ ಸ್ನೇಹಿತರಾದರು. ವಾಲಿ ಸುಗ್ರೀವರ ದ್ವೇಷಕ್ಕೆ ಕಾರಣವನ್ನು ವಿವರವಾಗಿ ಅರಿಯುವುದಕ್ಕೆ ಮೊದಲೇ ಸುಗ್ರೀವನ ಬೇಡಿಕೆಗೊಳಗಾಗಿ ವಾಲಿಯ ಪರಿಚಯವಿಲ್ಲದಿದ್ದರೂ "ವಾಲಿಯ ವಧಿಸದೆ ಇರಲಾರೆ"ನೆಂದೇ ರಾಮನು ಸುಗ್ರೀವನಿಗೆ ವಾಗ್ದಾನ ಮಾಡಿದ. ಈ ವಿಚಾರದಲ್ಲಿ ವೀರಪ್ಪಮೊಯಿಲಿಯವರು ಒಂದು ಪ್ರತಿಜ್ಞೆ ಮಾಡುವುದಕ್ಕೂ ಆ ಪ್ರತಿಜ್ಞೆ ಕಾರ್ಯಗತವಾಗುವುದಕ್ಕೂ ಬರುವ ಎಡರು ತೊಡರುಗಳ ನ್ನೂ ಮಾನಸಿಕ ವಿಶ್ಲೇಷಣೆಗಳನ್ನು ರಾಮನ ಮೂಲಕ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ನಿರಾಯುಧನಾದ ವಾಲಿಯನ್ನು ಮರದ ಮರೆಯಲ್ಲಿ ನಿಂತು ಬಾಣದಿಂದ ಕೊಲ್ಲುವಾಗ ಇತ್ತ ಕೊಲ್ಲುವುದು ಧರ್ಮಬಾಹಿರ ಅತ್ತ ಕೊಲ್ಲದಿದ್ದರೆ ಪ್ರತಿಜ್ಞಾಭಂಗವಿಧಿ ಬರೆದ ಗೆರೆಯೆಂದು ಮನುಜ ಧರ್ಮವ ತೊರೆದು ಸಮರನೀತಿಯ ತ್ಯಜಿಸಿ ದುಷ್ಪಥದಿ ನಡೆಯಬಹುದೇ ? ಎಂದೇ ಬಾಣಪ್ರಯೋಗ ಮಾಡಲು ಹಿಂಜರಿಯುತ್ತಾನೆ. ವಾಲಿ ರಾಮನ ಸ್ನೇಹಿತನ ಶತ್ರುವೇ ಹೊರತು ತನಗೆ ನೇರ

ಶತ್ರುವಲ್ಲ. ಸಾಕೇತನಗರದರಿಪುವಲ್ಲ. ಪಂಚವಟಿಯಲ್ಲಿ ಕ್ರೂರ ಅಥವಾ ಸಾಧು ಪ್ರಾಣಿಗಳನ್ನು ಕಂಡರೆ ಅವುಗಳನ್ನು ಪ್ರೀತಿಯಿಂದ ಕಾಣುತ್ತಿದ್ದ, ಕರುಣೆ ತೋರುತ್ತಿದ್ದ ತಾನು ಈಗ ವಾನರೇಂದ್ರನನ್ನು ಮೋಸದಿಂದ ಕೊಲ್ಲುವ ಕ್ರೌರ್ಯವನ್ನು ಹೇಗೆ ತಾಳಲಿ? ಎಂದೇ ಚಿಂತಿಸುತ್ತಾನೆ. ಅಷ್ಟೇ ಅಲ್ಲ, ವಾಲಿಯನ್ನು ಕೊಂದದ್ದೇ ಆದರೆ ಕಿಷ್ಕಿಂಧೆಯ ಜನ ಅದನ್ನು ಸಹಿಸದೆ ಬಂಡೆದ್ದು ಸಮರವನ್ನೇ ಸಾರಬಹುದು ಈ ಶಂಕೆ ರಾಮನನ್ನು ಕಾಡುತ್ತದೆ. ಈ ಅಂತರಂಗದ ಹೊಯ್ದಾಟ ಓದುಗರ ಸಹಾನುಭೂತಿ ವಾಲಿಯ ಕಡೆಗೇ ವಾಲುವಂತೆ ಮಾಡುತ್ತದೆ.

ವಾಲಿಯು ಸುಗ್ರೀವನಿಗೆ ಕೊಟ್ಟ ಕೋಟಲೆಗಳನ್ನೂ ಸುಗ್ರೀವನ ಹೆಂಡತಿ ರುಮೆಯನ್ನು ತನ್ನ ಅಂತಃಪುರಕ್ಕೆ ಕೊಂಡೊಯ್ದು ಅಪರಾಧಿ ಎಂಬುದನ್ನೂ ವಾಲಿಯ ದೌರ್ಜನ್ಯವನ್ನು ಎತ್ತಿ ತೋರಿಸಿ ವಾಲಿವಧೆಯನ್ನು ಸಮರ್ಥಿಸುವನು ಲಕ್ಷ್ಮಣ. ವೀರಪ್ಪ ಮೊಯಿಲಿಯವರು ತಮ್ಮ ಕಾವ್ಯದಲ್ಲಿ ಲಕ್ಷ್ಮಣನಿಗೆ ವಿಶೇಷ ಮಹತ್ತ್ವವನ್ನು ಕೊಟ್ಟಿದ್ದಾರೆ. ವಾಲಿವಧೆಗೆ ಕುಂದಿದ ರಾಮನ ಮನಸ್ಸನ್ನು ಪ್ರಜ್ವಲಗೊಳಿಸುವನು ಲಕ್ಷ್ಮಣ. ವಾಲಿ, ಸುಗ್ರೀವರು ಸಮಬಲರು. ಸಮರೂಪರು. ನಾಗಪುಷ್ಪಮಾಲೆಯನ್ನು ಧರಿಸಿದ ಸುಗ್ರೀವನ ಆರ್ತನಾದ ಅಗ್ನಿಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ ರಾಮನನ್ನು ಕಾರ್ಯನಿರತನನ್ನಾಗಿ ಮಾಡಲು ಹುರಿದುಂಬಿಸಿದುವು. ಬಾಣಪ್ರಯೋಗ ಮಾಡಿದ ಆ ಬಾಣ ವಾಲಿಯ ಹೃದಯಕ್ಕೆ ನಾಟಿತು. ಆಗ ವಾಲಿ ಪ್ರಶ್ನಿಸಿದ ಬಗೆ "ರಾಮ ! ರಾಜಧರ್ಮವ ತೊರೆದು, ದೇವಧರ್ಮವ ತೊರೆದು ನನ್ನನ್ನು ಕೊಲ್ಲುವುದು ಸರಿಯೇ ? ನಿನ್ನ ಪೌರುಷವೇನು ? ಗೈದಕೃತ್ಯವಿದೇನು ? ಸತಿಯ ಮೋಹದಿ ಬೆಂದು ಕಂಡವರ ನುಡಿ ಕೇಳಿ ಮರೆಯೊಳಗೆ ಗುರಿಯಿಟ್ಟು ನೆಟ್ಟಿರುವೆ. ಉತ್ತರದಿಂದ ಬಂದು ದಕ್ಷಿಣದ ಮುಗ್ಧರನು ವಂಚಿಪುದು ಹದವಾಯ್ತೇ?" ಎಂದೇ ಛೇಡಿಸುತ್ತಾನೆ. "ನಿರಾಯುಧನನ್ನು ಮರೆಯಲ್ಲಿ ನಿಂತು ಬಾಣಪ್ರಯೋಗ ಮಾಡುವುದು ಸರಿಯೇ? ಸೀತಾನ್ವೇಷಣೆಗಾಗಿ ನೇರವಾಗಿ ನನ್ನೊಡನೆ ಸಂಪರ್ಕಿಸಿದ್ದರೆ ನಾನೇ ನಿನಗೆ ಸಹಾಯ ಮಾಡುತ್ತಿದ್ದೆ. ಅಥವಾ ಧರ್ಮಾತ್ಮನಲ್ಲವೇನು ಹಿತನುಡಿಯ ಮೇಳೈಸಿ ಐಕ್ಯಮಂತ್ರವನೆಮಗೆ ಬೋಧಿಸುತ ಸಹೋದರರನ್ನು ಬೆಸೆಯಬಹುದಾಗಿತ್ತು." ಎಂಬ ವಿವೇಕವನ್ನು ಬೋಧಿಸುತ್ತಾನೆ.

"ನೀ ಬಯಸೆ ರಾವಣನ ಕಂಠವನು ಹಾರದಲಿ ಬಿಗಿದು ತಂದು ನಿಲಿಸುತ್ತಿದ್ದ ಧರ್ಮಸಂಕಟವೆನಗಿದೆ" ಎಂದು ನಿಂದಿಸುತ್ತಾನೆ. ಈ ಮಾತುಗಳು ವಾಚಕರ ಮನಸ್ಸನ್ನು

ಕರಗಿಸುತ್ತವೆ. ರಾಮನ ಮನಸ್ಸು ಪಶ್ಚಾತ್ತಾಪದಿಂದ ಕಮರಿ ಹೋಯಿತು. ಆದರೂ ರಾಮ ವಾಲಿಯನ್ನು ಕುರಿತು "ವಾಲಿ ! ನಿನ್ನ ತಮ್ಮ ನಿನ್ನ "ದೋಷ ಮಡು ಇಂಗಿದೊಡೆ ತುಷ್ಟಿ ಫಲಿಸುವುದೆಂದು" ಕಾದಿದ್ದ. ಅಂಥವನನ್ನು ನೀನು ನೇಣುಗಂಬದಿ ಕೊಂದು ತಂದು ತೋರಣ ಮಾಡಬೇಕು ಅದೂ ಅಲ್ಲದೆ ನಿರಪರಾಧಿಯಾದ ಸೋದರನ ಶವವನ್ನು ಕತ್ತೆ ರಥಕ್ಕೆ ಕಟ್ಟಿ ರಾಜ್ಯದಲ್ಲಿ ಮೆರೆಸಬೇಕೆಂಬ ಯೋಚನೆಯು ಸರಿಯೇ ? ತಮ್ಮನನ್ನು ಉಟ್ಟಿದ್ದ ಬಟ್ಟೆಯಲ್ಲಿ ರಾಜ್ಯದಿಂದ ಹೊರಗೆ ಅಟ್ಟಬಹುದೇ? ರುಮೆಯನ್ನು ನಿನ್ನ ಅಂತಃಪುರಕ್ಕೆ ಒಯ್ದು ಅವರ ದಾಂಪತ್ಯವನ್ನು ಕೆಡಿಸಬಹುದೇ" ಎಂದು ವಾಲಿಯ ಅಪರಾಧಗಳನ್ನು ಎತ್ತಿ ತೋರಿಸಿದನು. ಎಷ್ಟೇ ಆದರೂ ರಾಮ, ಸುಗ್ರೀವರಿಗೆ ಪಶ್ಚಾತ್ತಾಪ, ಪರಿತಾಪ ಕಾಡುತ್ತಲೇ ಇತ್ತು.

ಇತ್ತ ವಾಲಿಗೆ ತನ್ನ ಮುಂಗೋಪ ಮತ್ತು ಆತುರತೆ ತನ್ನ ಪತನಕ್ಕೆ ಹೇತುವೆಂದೂ ತನ್ನ ದುರಭಿಮಾನ ಬೆಳೆದು ತನ್ನನ್ನೇ ನುಂಗಿತು ಎಂದೂ ಅರಿವಾಯ್ತು ನೆಟ್ಟ ಬಾಣದ ಘಾತದಿಂದ ಪ್ರಜ್ಞೆ ತಪ್ಪಿತು. ಮತ್ತೆ ಚೇತರಿಸಿಕೊಂಡ ವಾಲಿಗೆ ಹೆಂಡತಿ ತಾರೆ, ಮಗ ಅಂಗದ, ತಮ್ಮ ಸುಗ್ರೀವ ಎಲ್ಲರೂ ಕಂಡರು. ವಾಲಿ ಧೀರರಾವಣನನ್ನು ಹೆಡೆಮುರಿ ಕಟ್ಟಿ ಅಂಗದನ ತೊಟ್ಟಿಲಿಗೆ ಕಟ್ಟಿದ ಶೂರ, ದ್ವಂದ್ವಯುದ್ಧದ ನಿಸ್ಸೀಮ. ಅಂಥವನನ್ನು ಮೋಸದಿಂದ ಕೊಲ್ಲಿಸಿದ ತಮ್ಮನನ್ನು ಕೆಕ್ಕರಿಸಿ ನೋಡದೆ ಮಿಂಚಿಹೋದುದಕ್ಕೆ ಚಿಂತಿಸ ಬೇಡವೆಂದೂ ತಾನು ರುಮೆಯನ್ನು ಕಾಮಿಸಲಿಲ್ಲ ಸುತೆಯಂತೆ ಪಾಲಿಸಿದೆನೆಂದೂ, ಮುಂದೆ ಈ ರಾಜ್ಯವನ್ನು ನೀನೇ ಒಪ್ಪಿಕೊಳ್ಳಬೇಕೆಂದೂ ತಿಳಿಸಿ ಅನೇಕ ರಾಜನೀತಿಗಳನ್ನು ಬೋಧಿಸಿದನು. ಅಂತ್ಯಕಾಲ ಸಮೀಪಿಸಲು ತನ್ನ ಮಡದಿ ತಾರೆಗೂ ಮಗ ಅಂಗದನಿಗೂ ನೀತಿ ವಾಕ್ಯಾಮೃತವನ್ನೇ ಸುರಿಸಿ ರಾಮನಿಗೆ ಕೈಮುಗಿದನು. ಸುಗ್ರೀವನ ದುಃಖ ಉಕ್ಕಿಬಂತು. ಅಣ್ಣನಿಗೆ ಕೈ ಮುಗಿದು "ಈ ರಾಜ್ಯ ಅಂಗದನಿಗೇ ಸೇರಿದ್ದು. ಚತುರಳೂ, ಪ್ರಾಜ್ಞಳೂ ಆದ ತಾರೆ ರಾಜ ಮಾತೆ ಮತ್ತು ಸಲಹೆಗಾರಳು. ನಾನು ಸಹಾಯಕನಾಗಿ ಉತ್ತರದ ಆರ್ಯ ಸಂಸ್ಕೃತಿ ಮತ್ತು ದಕ್ಷಿಣದ ದ್ರಾವಿಡ ಸಂಸ್ಕೃತಿ ಎರಡನ್ನೂ ಬೆಸಸಿ ಹೊಸ ಇತಿಹಾಸವನ್ನೇ ಸೃಷ್ಟಿಸುವೆವು ಎಂಬ ಭರವಸೆಯನ್ನು ಕೊಟ್ಟನು.

ವಾಲಿ ಮಹಾಶೂರ. "ರಾಮ ಲಕ್ಷ್ಮಣರು ಎದುರಾಗಿ ಮುಖಾಮುಖಿ ಕಾದಿದ್ದರೆ ತನ್ನ ಎದುರಾಳಿಯನ್ನು ಕಡಿದು ಬಿಸುಡುವೆನು. ಕರುಳ ಬಿಗೆವೆನು. ನೆತ್ತರು ಕುಡಿವೆನು.

ಆರಿಗೂ ಮಣಿಯೆನು. ಆರಿಗೂ ಶರಣಾಗೆನು. ಅಡಿಯ ಮುಂದಿಡೆಸ್ವರ್ಗ, ಅಡಿಯ ಹಿಂದಿಡೆ ನರಕ ಮರಣವೇ ಮಹಾನವಮಿ" ಎಂದು ಎದುರು ಬದರು ಸಮರವನ್ನೇ ಹಾರೈಸುತ್ತಿದ್ದ ವಾಲಿ ಎಲ್ಲಿಂದಲೋ ಪರೋಕ್ಷವಾಗಿ ಬಂದ ಬಾಣಕ್ಕೆ ತುತ್ತಾಗಬೇಕೇ? ಎಂದು ಯಾರಾದರೂ ನಿಟ್ಟುಸಿರು ಬಿಡದೆ ಇರಲಾರರು. ಹೀಗಿರುವಾಗ ಬಾಣಪ್ರಯೋಗ ಮಾಡಿದ ರಾಮನ ಹೃದಯ ಕರಗಿ ನೀರಾಯಿತು. ಮನನೊಂದ ರಾಮ ವಾಲಿಯ ಶಿರವನ್ನು ತನ್ನ ತೊಡೆಯ ಮೇಲಿಟ್ಟು, ಅವನ ಸದ್ಗುಣಗಳನ್ನು ಮೆಚ್ಚಿ ಅವನ ಆಸೆಗಳನ್ನು ಪೂರೈಸುವುದಾಗಿ ಭರವಸೆ ಕೊಟ್ಟನು. ಆಗ ವಾಲಿ "ಆತ್ಮಮುಕ್ತಿಯನಿತ್ತು ಪ್ರೇಮದಲಿ ಕಳುಹಿಸು. ರಾಮ ತಾರಕ ಮಂತ್ರ ಎದೆಯೊಳಗೆ ಉಲಿಯುತಿದೆ. ರಾಮ!" ಎಂದೇ ರಾಮನನ್ನು ಬೇಡಿಕೊಳ್ಳುತ್ತಾನೆ. ಈ ದೃಶ್ಯವು ಯಾರ ಮನವನ್ನಾದರೂ ಕರಗಿಸದೆ ಇರದು. ವಾಲಿಯ ಅಂತ್ಯಕಾಲ ಸಮೀಪಿಸಿತು. ನೆಟ್ಟಿದ್ದ ಬಾಣವನ್ನು ನೀಲ ತೆಗೆದನು. ನೊಂದ ಜೀವ ನಂದಿಹೋಯಿತು. ಅಳಿದವನ ಚಿಗುರಾಸೆ ಉಳಿದವನ ಕರುಳಲ್ಲಿ ಉಳಿದು ಮುಂದೆ ಅರಳಿ ಬೆಳಗಿತು.

20ನೆಯ ಶತಮಾನದ ಅಂತ್ಯದ ಕಾಲಪರಿಸ್ಥಿತಿ, ರಾಜ್ಯಾಡಳಿತದ ಅನುಭವ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಇವುಗಳಿಂದ ಮೊಯಿಲಿಯವರು ಶ್ರೀ ರಾಮಾಯಣ ಮಹಾನ್ವೇಷಣೆಯಲ್ಲಿ ವಾಲಿಯ ಪಾತ್ರಕ್ಕೆ ಒಂದು ಹೊಸ ಮೆರುಗನ್ನೇ ಕೊಟ್ಟಿದ್ದಾರೆ. ಓದುಗರಲ್ಲಿ ಪಂಪಕವಿಯ ದಾನಶೀಲಕರ್ಣ ರನ್ನಕವಿಯ ಅಭಿಮಾನ ದುರ್ಯೋಧನ, ನಾಗಚಂದ್ರನ ಅಸಮ ಸಾಹಸ ರಾವಣ ಇವರ ನೆನಪಾಗದೆ ಇರಲಾರದು.

ಮೊಯಿಲಿಯವರು ವಾಲಿಯನ್ನು ಒಬ್ಬ ರುದ್ರನಾಟಕದ ನಾಯಕನಂತೆ ಚಿತ್ರಿಸಿದ್ದಾರೆ. ಪೂರ್ವಾಪರವಿಲ್ಲದೆ ಮುಂಗೋಪ, ದುಷ್ಟಚಿಂತನೆ ಎಂತಹ ಗಾಢ ಪ್ರೇಮವನ್ನಾದರೂ ದ್ವೇಷಕ್ಕೆ ಎಡೆಮಾಡುವುದೆಂಬುದನ್ನು ಕವಿ ಹೃದಯಂಗಮವಾಗಿ ಮೂಡಿಸಿ ವಾಚಕರ ಸಹಾನುಭೂತಿ ವಾಲಿಯ ಕಡೆಗೇ ವಾಲುವಂತೆ ಮಾಡಿದ್ದಾರೆ. ಇತ್ತೀಚೆಗೆ ಈ ಕಾವ್ಯಕ್ಕೆ ಪ್ರತಿಷ್ಠಿತ ಮೂರ್ತಿದೇವಿ ಪುರಸ್ಕಾರ ಲಭಿಸಿದ್ದು ಮತ್ತು ಈ ಕವಿ ನಮ್ಮ ನಮ್ಮವರೇ ಆರ್.ಟಿ. ನಗರದಲ್ಲಿ ನೆಲೆಸಿದರೂ ರಾಷ್ಟ್ರದ ಕಾನೂನು ಮಂತ್ರಿಯಾಗಿರುವುದು ನಮ್ಮ ಸುದೈವ.



ಪುಸ್ತಕ ವಿಮರ್ಶೆ

# "ಏಕಾದ್ಸಿ ಉಪ್ವಾಸ"

- ಡಾ. ನಾ. ಸೋಮೇಶ್ವರ

ಆಚೆ ಮನೆ ಸುಬ್ಬಮ್ಮಂಗೆ ಇವತ್ತು ಏಕಾದ್ಸಿ - ಉಪ್ವಾಸ
ಎಲ್ನೋ ಸ್ವಲ್ಪ ತಿಂತಾರ್ ಅಷ್ಟೆ ಉಪ್ಪಿಟ್ಟು-ಅವ್ಲಕ್ಕಿ-ಪಾಯ್ಸ
ಮೂರೋ, ನಾಕೋ ಬಾಳೇ ಹಣ್ಣು ಸ್ವಲ್ಪ ಚಕ್ಕಲಿ-ಕೋಡ್‌ಬಳೆ
ಗಂಟೆಗೆರಡು ಸೀಬೇಹಣ್ಣು ಆಗಾಗ ಒಂದೊಂದ್ ಕಿತ್ತಳೆ
ಮಧ್ಯಾಹ್ನೆಲ್ಲಾ ರವೇ ಉಂಡೆ ಹುರ್ಳೀಕಾಳಿನ ಉಸ್ಲಿ
ಒಂದೊಂದ್ಸಲ ಬಿಸಿ ಸಂಡ್ಗೆ ಒಂದೋ ಎರಡೋ ಇಡ್ಲಿ
ರಾತ್ರಿ ಪಾಪ ಉಪ್ಪಿಟ್ಟೇನೆ ಒಂದ್ಲೋಟದ ತುಂಬ ಹಾಲು
ಪಕ್ಕದ ಮನೆ ರಾಮೇಗೌಡರ ಸೀಮೇ ಹಸು ಹಾಲು

ಈ ಹಾಡನ್ನು ಬರೆದವರು ಮತ್ಯಾರೂ ಅಲ್ಲ ; ನಮ್ಮ ನಾಡಿನ ಹಿರಿಯ ವಿಜ್ಞಾನಿಗಳಲ್ಲಿ ಒಬ್ಬರಾದ ಶ್ರೀ ಸಿ.ಆರ್. ಸತ್ಯ ಅವರು.

'ಏಕಾದ್ಸಿ ಉಪ್ವಾಸ' ಹೇಳುವುದಕ್ಕೇ ಬಹಳ ಕಷ್ಟ. ಅದು ಈ ಪುಸ್ತಕದ ಶೀರ್ಷಿಕೆ, 'ಏಕಾದ್ಸಿ ಉಪ್ವಾಸ' ಶ್ರೀ ಸಿ. ಆರ್. ಸತ್ಯ ಅವರು ಬರೆದಿರುವಂತಹ ಹಾಸ್ಯ ಲೇಖನಗಳ ಸಂಗ್ರಹ. ಪ್ರಕಟಿಸಿದವರು ಶಿವರಾಮಕಾರಂತ ವೇದಿಕೆ, ಆರ್.ಟಿ. ನಗರ ಬೆಂಗಳೂರು. ಬೆಲೆ ಕೇವಲ ರೂ. 70 ಮಾತ್ರ.

ಇವತ್ತಿಗೆ ಸುಮಾರು ಐವತ್ತು ವರ್ಷಗಳ ಹಿಂದೆ ಸತ್ಯ ಅವರು ವಿದ್ಯಾರ್ಥಿಯಾಗಿದ್ದಾಗ ಯಾವುದೋ ಒಂದು ಗುಂಗಿನಲ್ಲಿ ಒಂದು ಹಾಡನ್ನು ಬರೀತಾರೆ. ಈ ಹಾಡನ್ನು ಬರೆದುಬಿಟ್ಟು ನೇರವಾಗಿ, ಸ್ವಲ್ಪ ಉದ್ಧಟನತದಿಂದ ನೋಡೋಣ ನನ್ನ ಕವನವನ್ನು ಪ್ರಕಾಶ ಪಡಿಸುತ್ತಾರೋ ಇಲ್ಲವೋ ಅಂತ ಹೇಳಿ ಸಂಪಾದಕರನ್ನೇ ಪರೀಕ್ಷೆ ಮಾಡಬೇಕು ಅನ್ನೋ ದೃಷ್ಟಿಯಿಂದ ನೇರವಾಗಿ ಅದನ್ನು ಕೊರವಂಜಿಯ ರಾಶಿ ಅವರಿಗೆ ಕಳುಹಿಸುತ್ತಾರೆ. ರಾಶಿ ಅವರು ಅದನ್ನು ನೋಡಿದ

ಕೂಡ್ಲೇನೇ ಅಹ ! ಎಷ್ಟು ಚೆನ್ನಾಗಿದೆ ಇದು ಅಂತ ಕೊರವಂಜಿಯಲ್ಲಿ ಮುದ್ರಿಸಿಯೇ ಬಿಡುತ್ತಾರೆ. ಅರೆ ಪ್ರಕಟವಾಗಿದ್ದಲ್ಲದೆ ; ಸಂಭಾವನೇ ಬೇರೆ ! ಅದೂ ಎರಡು ರೂಪಾಯಿ ಆಶ್ಚರ್ಯವಾಗುತ್ತೆ ಸತ್ಯ ಅವರಿಗೆ. ಆ ಕವನವೇ ಈಗಷ್ಟೇ ನಾವು ಕೇಳಿದ್ವಂತಹ 'ಸುಬ್ಬಮ್ಮನ ಉಪ್ವಾಸ'.

ಸಿ. ಆರ್. ಸತ್ಯ ಅವರು ವಿಜ್ಞಾನಿ ಅಂತ ನಾವೆಲ್ಲಾ ತಿಳಿದುಕೊಂಡಿದ್ದೇವೆ. ಟಾಟಾ ಅಪ್ಲಾಯ್ಡ್ ಮೇಟೀರಿಯಲ್ಸ್‌ನಲ್ಲಿ ಬಹಳ ದೊಡ್ಡ ಹುದ್ದೆಯಲ್ಲಿ ಇದ್ದಂತಹವರು. ಮಾಜಿ ರಾಷ್ಟ್ರಪತಿ ಅಬ್ದುಲ್ ಕಲಾಂರವರೊಂದಿಗೆ ಕೆಲಸ ಮಾಡಿದ್ದಂತಹವರು. ನಾವು ರಾಕೆಟ್ ಅನ್ನು ಹಾರಿಸಬೇಕಾದರೆ ಎಷ್ಟೆಲ್ಲಾ ಕಷ್ಟಪಟ್ಟಿದ್ದೇವೆ ಅನ್ನೋದಕ್ಕೆ ಸಾಕ್ಷಿಯಾಗಿ ಇವರ ಒಂದು ಚಿತ್ರವನ್ನು ನೋಡಿದರೆ ಸಾಕಾಗುತ್ತೆ. ಈ ಚಿತ್ರದಲ್ಲಿ ಸೈಕಲ್ ಅನ್ನು ತಳ್ಳಿಕೊಂಡು ಹೋಗುತ್ತಾ ಇದ್ದಾರಲ್ಲ ಅವರೇ ಸಿ.ಆರ್.ಸತ್ಯ. ಆ ಸೈಕಲ್ ಹಿಂದೆ ಏನೋ ಇಟ್ಟುಕೊಂಡಿದ್ದಾರಲ್ಲಾ ; ಅದು ರಾಕೆಟ್ಟಿನ ಮೂತಿ ಭಾಗ, ಎಂತಹ ಬಡತನ ಇತ್ತು ನಮಗೇ ಅಂದರೆ ರಾಕೆಟ್ಟಿನ ಬಿಡಿ ಭಾಗಗಳನ್ನು ಸಾಗಿಸೋಕ್ಕೆ ಒಂದು ಜೀಪ್ ಇರಲಿಲ್ಲ ನಮ್ಮ ಹತ್ತಿರ. ಹೀಗೆ ಸೈಕಲ್‌ನಲ್ಲಿ ಅದನ್ನು ಇಟ್ಟುಕೊಂಡು ಸಾಗಿಸಬೇಕಾಗಿ ಬಂತು. ಹೀಗೆ ನಮ್ಮ ವಿಜ್ಞಾನ ಬೆಳೆದು ಬರುವುದಕ್ಕೆ ಸಿ.ಆರ್. ಸತ್ಯ ಅವರಂತಹ ಅನೇಕ ವಿಜ್ಞಾನಿಗಳು ದುಡಿದಿದ್ದಾರೆ. ಇವತ್ತು ಜಗತ್ತಿನ ಅಗ್ರಗಣ್ಯ ರಾಷ್ಟ್ರದಲ್ಲಿ ನಮ್ಮ ಭಾರತವೂ ಒಂದು ಅಂತ ಹೆಮ್ಮೆಯಿಂದ ಹೇಳಿಕೊಳ್ಳಬೇಕಾದರೆ ಸಿ.ಆರ್. ಸತ್ಯ ಅವರಂತಹ ಅನೇಕ ವಿಜ್ಞಾನಿಗಳ ಶ್ರಮ ಇದೆ ಅನ್ನೋದನ್ನು ನಾವು ಗಮನಿಸಬೇಕಾಗುತ್ತೆ, ಪುರಸ್ಕರಿಸಬೇಕಾಗುತ್ತೆ, ಗುರುತಿಸಬೇಕಾಗುತ್ತೆ.

'ಏಕಾದ್ಶಿ ಉಪ್ವಾಸ' ಅನೇಕ ಹಾಸ್ಯ ಲೇಖನಗಳನ್ನು ಒಳಗೊಂಡಿದೆ. ಇದರಲ್ಲಿ ಇರತಕ್ಕಂತ ಲೇಖನಗಳನ್ನು ಎಲ್ಲಾ ಓದ್ತಾ ಹೋಯ್ತು ಅಂದರೆ ಹುಬ್ಬು ಎಷ್ಟೇ ಗಂಟಿಕ್ಕಿರಲಿ ಅದು ಸಡಿಲವಾಗುತ್ತೆ. ಮುಗುಳು ನಗೆಯನ್ನು ಮುಖದಲ್ಲಿ ತರಿಸುತ್ತೆ. ಒಂದು ಮಾತನ್ನು ಇವರು ಹೇಳುತ್ತಾರೆ ಒಂದು ಪಾತ್ರದ ಮೂಲಕ ! ಅಲೆಕ್ಸಾಂಡರ್ ದಂಡೆತ್ತಿ ಬಂದು ಭಾರತದಿಂದ ಏನೇನೋ ತೊಗೊಂಡು ಹೊರಟು ಹೋದನಲ್ಲಾ... ಅವುಗಳಲ್ಲಿ ಹಾಸ್ಯವೂ ಒಂದು ಅಂತ ಪಾತ್ರದ ಮೂಲಕ ಇದನ್ನು ಹೇಳಿಸುತ್ತಾರೆ. ಕೈಲಾಸಂ ಅವರೂ ಸಹ ಹೇಳುತ್ತಾ ಇದ್ದರು. ಕನ್ನಡದವರಿಗೆ ಹಾಸ್ಯ ಪ್ರಜ್ಞೆ ಸ್ವಲ್ಪ

ಕಮ್ಮಿ ಅಂತ ಹೇಳಿ. ಆ ಒಂದು ದೃಷ್ಟಿಯಿಂದ ಇಲ್ಲಾ ಕನ್ನಡಿಗರಿಗೂ ಹಾಸ್ಯ ಪ್ರಜ್ಞೆ ಇದೆ ಅಂತ ತಿಳಿಕೋಬೇಕಾಯ್ತು ಅಂತ ಅಂದ್ರೆ ಇಂತಹ ಪುಸ್ತಕವನ್ನು ಓದಬೇಕಾಗುತ್ತೆ. ಓದಿದರೆ ನಿಜಕ್ಕೂ ನಮ್ಮ ಮನಸ್ಸಿನಲ್ಲಿರೋ ನೋವು ನಲಿವುಗಳನ್ನು ಕ್ಷಣ ಕಾಲಕ್ಕಾದರೂ ಮರೆತು ಇಲ್ಲಿನ ಪಾತ್ರಗಳ ಜೊತೆ ನಾವು ಸಹ ಒಂದಾಗಬಹುದು. ಒಬ್ಬ ವಿಜ್ಞಾನಿಯಾಗಿದ್ದುಕೊಂಡು ಹಾಸ್ಯಲೇಖನಗಳನ್ನು ಇಷ್ಟು ಸೊಗಸಾಗಿ ಬರೆದು ಅವನ್ನ ಕ್ರಮೇಣ ಮುದ್ರಣ ಮಾಡುತ್ತಾ ಹೋಗುತ್ತಾರೆ. ಕೊರವಂಜಿ ನಿಂತು ಹೋಗುತ್ತೆ. ಕೊರವಂಜಿ ಕಾಡಿಗೆ ಹೋದ ಮೇಲೆ ಅವರ ಮಗಳು ಅಪರಂಜಿಯನ್ನು ಕರೆದುಕೊಂಡು ಬರುತ್ತಾರೆ; ಶಿವಕುಮಾರ್ ಅವರು. ಶಿವಕುಮಾರ್ ಅವರು ರಾಶಿಯವರ ಮಗ; ಅಪರಂಜಿ ಶಿವು. ಅವರು ಈಕೆಯನ್ನು ಕರೆದುಕೊಂಡು ಬಂದು ಈಕೆಯ ಮೂಲಕ ಸತ್ಯ ಅವರು ಬರೆದಿರುವಂತಹ ಹಾಸ್ಯಲೇಖನಗಳನ್ನು ನಮಗೆಲ್ಲಾ ಉಣಬಡಿಸಿದ್ದಾರೆ. ಸತ್ಯ ಅವರು ಮತ್ತಷ್ಟು ಒಳ್ಳೆಯ ಲೇಖನಗಳನ್ನು ಬರಿಯಲಿ ತಮ್ಮ ಅನುಭವಗಳನ್ನು ಒಂದು ಪುಸ್ತಕದ ರೂಪದಲ್ಲೂ ಸಹ ಬರೀಲಿ, ವಿಜ್ಞಾನಿಗಳಾಗಿ ಅವರು ಪಟ್ಟಂತ ನೋವು ನಲಿವುಗಳನ್ನೂ ಬರೆದರೆ ಚೆನ್ನಾಗಿರುತ್ತೆ.

**(ದಿನಾಂಕ 7-7-2009ರಂದು ದೂರದರ್ಶನದ ಚಂದನ ವಾಹಿನಿಯಲ್ಲಿ ಪ್ರಸಾರವಾದ ವಿಮರ್ಶೆ.)**



ನನ್ನ ವಾರಿಗೆಯ ಸಮರ್ಥ ಕವಿಗಳಲ್ಲಿ ಇಬ್ಬರಾದ ಚಂದ್ರಶೇಖರ ಕಂಬಾರ ಮತ್ತು ಕೆ. ಎಸ್. ನಿಸಾರ್ ಅಹಮದರ ಕಾವ್ಯದಂತೆ ವೆಂಕಟೇಶಮೂರ್ತಿಯವರದೂ ವಿಮರ್ಶಕರಿಗೆ ಮಾತ್ರವಲ್ಲದೆ ಕಾವ್ಯಪ್ರಿಯರಾದ ಜನರಿಗೂ ಇಷ್ಟವಾಗಬಲ್ಲ ಸುಗಮತೆಯನ್ನು ಪಡೆದಿದೆ. ಅಪ್ರಾಮಾಣಿಕವಾಗದಂತೆ ಜನಪ್ರಿಯವಾಗಬಲ್ಲ ಶಕ್ತಿ ಇರುವ ಕವಿ ನೆರೂಡನಷ್ಟು ದೊಡ್ಡವನಾಗಿ ಬೆಳೆಯಬಲ್ಲ. ಇದನ್ನು ಸಾಧ್ಯವಾಗಿಸಬಲ್ಲ ಸಂಸ್ಕೃತಿ ಆರೋಗ್ಯಕರವಾದದ್ದು. ನಮ್ಮ ಕನ್ನಡ ಕವಿಗಳಲ್ಲಿ ಕೆಲವರಾದರೂ ತಮಗೆ ತೀವ್ರವಾದದ್ದನ್ನು ಜನರಿಗೂ ಮುಟ್ಟಬಲ್ಲಂತೆ ಬರೆಯಬಲ್ಲರೆಂಬುದರಿಂದ ನಾವು ಸಂತೋಷಪಡಬೇಕು.

**- ಡಾ|| ಯು.ಆರ್. ಅನಂತಮೂರ್ತಿ**

ಸಣ್ಣ ಕತೆ

# ಮಹಂತಪ್ಪ

*- ಸಿ.ಎನ್. ಶ್ರೀನಾಥ್*

ಮಹಂತಪ್ಪ ರಿಟೈರ್ ಆದಾಗ ಬಹಳ ಬೇಜಾರಾಯಿತು. ಏನಯ್ಯಾ, ಜೀವನಕ್ಕೆ ತೊಂದರೆಯಿಲ್ಲವಾ ಎಂದೆ. ಏನೋ ಸ್ವಾಮಿ ದೇವರಿದ್ದಾನೆ ಅಂತ ಸಂತೋಷವಾಗೇ ಮನೆಗೆ ಹೋದ. ನಮ್ಮಲ್ಲಿ ಸುಮಾರು ವರ್ಷಗಳಿಂದ ಕೆಲಸ ಮಾಡಿಕೊಂಡಿದ್ದ. ಅವನು ಮನೆಗೆ ಹೋದ ಮೇಲೇ ತಿಳಿದದ್ದು ಅವನ ಷಾಗಿರ್ದ್ ಹುಸೇನನಿಂದ - ಮಹಂತಪ್ಪ ದೊಡ್ಡ ಕುಳ. ಜವಾನನಾದರೂ ಆಸ್ತಿವಂತ ಲೇವಾದೇವೀಲಿ ನಿಪುಣ ಕುದುರೆ ರೇಸುಗಳ ಗೈಡು ಮನೆ ಜಮೀನು ವ್ಯವಹಾರ ಎಲ್ಲಾ ಇದೆ ಅಂತ. ಮತ್ತೆ ನನ್ನ ಕೋಟುಗಳು ಈ ಶರ್ಟುಗಳು ಇವೆಲ್ಲಾ ಏಕೆ ಬೇಕಿತ್ತು. ಹಾಗಾದರೆ ಜವಾನಗಿರಿ ಏಕೆ ಬೇಕಿತ್ತು. ಅದೇ ತಪ್ಪು. ಜವಾನಗಿರಿ ಇದ್ದರೇನೆ ಅವನ ವ್ಯವಹಾರ ನಡೆಸೋದು. ಆಫೀಸು, ಟೈಪಿಸ್ಟು, ಫೋನು, ಕುರ್ಚಿ, ಟೇಬಲು ಫ್ಯಾನು ಇವೆಲ್ಲಾ ಇದ್ದರೆ ತಾನೆ ನೋಡು, ಈಗ ಎಷ್ಟೊಂದು ಖರ್ಚು ಉಳಿಯಿತು. ಆಮೇಲೆ ಕುರ್ಚಿಯಲ್ಲಿ ಕುಂತು ವ್ಯಾಪಾರ ನಡೆಸೋದಲ್ಲ ಈ ಬಾಬ್ತು. ಸರಿಯಪ್ಪ ಎಂದೆ.

ಆರು ತಿಂಗಳಾದ ಮೇಲೆ ನಾನು ಆಫೀಸಿನಲ್ಲಿ ಕೂತು ಏನೋ ಬರೀತಿರುವಾಗ ಮಹಂತಪ್ಪ ಬಂದು ನಿಂತುಕೊಂಡ ಟೋಪಿ ಮೇಲೆ ತಲೆ ಕೆರೆದುಕೊಂಡು. "ಓಹೋ ಏನಯ್ಯಾ ಚೆನ್ನಾಗಿದ್ದೀಯಾ." ಎಂದೆ. "ಏನೋ ಬಿಡಿ ಸ್ವಾಮಿ ನನಗೇನು ರೋಗ. ದೇವರು ಎರಡೊತ್ತು ಊಟ ಕೊಟ್ಟಿರೆ ಸಾಕು ರಾಮಾಂತ ರೂಮಿನಲ್ಲಿ ಬಿದ್ದುಕೋತೀನಿ" ಅಂದ. "ಯಾಕೆ ರೂಮು? ಮನೆ ಇಲ್ಲವಾ" ಅಂದೆ. "ಅಯ್ಯೋ ಅದೊಂದು ಕಥೆ. ನಾನು ಮನೆಗೆ ಹೋಗಿ 17 ವರ್ಷ ಆಯಿತು. 5 ಮಕ್ಕಳಿಗೆ ಮದುವೆ ಮಾಡಿದೆ. ದೊಡ್ಡ ಮಗನಿಗೆ ಒಂದು ಸೈಟು ಮನೆ ಕೊಟ್ಟಿದ್ದೀನಿ. ಮದುವೆ ಆಗೋ ಅಂದರೆ ದುರು ದುರು ನೋಡ್ತಾನೆ. ಏನೋ ಲಾಟರಿ ವ್ಯಾಪಾರ ಮಾಡ್ತಾನಂತೆ. ತಿಂದು ಗೂಳಿ ಅಂಗೆ ಇದ್ದಾನೆ ಸ್ವಾಮಿ. ನಾನು ಯಾರ ತಂಟೆಗೂ ಹೋಗೋಲ್ಲ. ಹಾಳಾಗಿ ಹೋಗಲಿ ಕೃಷ್ಣ ಮಂದಿರದಲ್ಲಿ ಒಂದು ಸಣ್ಣ ರೂಮು ಇದೆ. ಅದರಲ್ಲಿ ಜಮಖಾನ ಚಾಪೆ ಮಗ್ಗೆ ಎಲ್ಲಾ ಇಟ್ಟಿದ್ದೆ. ಅಲ್ಲೇ ನಾನೂ ಬಿದ್ದುಕೋತೀನಿ. ಹೋಟೆ

315 ರೂ. ಬರ್ತದೆ ಸ್ವಾಮಿ. ಕಥೆ ಕೇಳಿಕೊಂಡು ಕಾಲ ಕಳೀತೀನಿ. ಇನ್ನು ಹೆಚ್ಚು ದಿವಸ ಇರಾಕಿಲ್ಲಾ ಸ್ವಾಮಿ". ಅಂದ.

"ಯಾಕಯ್ಯ ನಿನಗೇನಾಗಿದೆ ಎಷ್ಟು ವಯಸ್ಸು, 60 ಆಗಿದೆಯಾ" ಅಂದೆ! ನನಗಲ್ಲ ಸ್ವಾಮಿ ನಾನಂದಿದ್ದು ಪ್ರಪಂಚಾನೇ ಲಯ ಆಗೋಗ್ತದೆ ಅಂತ ಕಥೆಲೀ ಹೇಳ್ತಾ ಇದ್ರು ಅದಕ್ಕೆ ಹಂಗಂದೆ. ಅಯ್ಯೋ ನನ್ನ ವಯಸ್ಸು ಕಟ್ಟಿಕೊಂಡು ಈಗೇನಾಗ್ಬೇಕು. ನನಗೆ ಸರಿಯಾಗಿ 81 ವರ್ಷ ಸ್ವಾಮಿ. ಪೋರ್ಟ್ ಹೈಸ್ಕೂಲು ಪಾಯ ತೆಗೆಯುವಾಗ ನನಗೆ 11 ವರ್ಷ ಬಸವನಗುಡೀಲೀ ಬ್ರಾಂಬರ ಮನೇಲೀ 2 ರೂಪಾಯಿಗೆ ಸೇರಿಕೊಂಡಿದ್ದೆ. ಆಯಮ್ಮ ಕೆಂಪಗೆ ಒಳ್ಳೆ ಪರಂಗಿ ಅವ್ರಾಗೆ ಇದ್ದರು. ನಾನು ಬಿಟ್ಟ ಎರಡು ವರ್ಷಕ್ಕೆ ಯಾರೋ ಮಿಲ್ಟ್ರಿಯವನ ಜೊತೆ ಸೀಮೆಗೆ ಓಟೋದ್ರಂತೆ, ಸ್ವಾಮಿ. ನನಗೇನ್ಗೊತ್ತು ಅವರ ಮನೆ ಅಡಿಗೆ ಸುಬ್ಬಪ್ಪ ಹೇಳಿದ್ದ." ಅದು ಸರಿ ನೀನ್ಯಾಕೆ ನಿನ್ನ ಹೆಣ್ಣು ಮಕ್ಕಳ ಮನೆಗೇ ಹೋಗಿ ಎರಡೆರಡು ತಿಂಗಳು ರಾಜನಂಗೆ ಕಾಲ ಕಳೀಬಾರ್ದು ಅಂದೆ. ಸರಿ ಸರಿ ಬಿಡಿ ನಾನೆಲ್ಲೂ ಹೋಗೋಲ್ಲ ಸ್ವಾಮಿ. ಒಬ್ಬ ಸ್ನೇಹಿತನ ಸಹವಾಸಾನೂ ಮಾಡೊಲ್ಲ. ಎಲ್ಲಾ ಕಳ್ಳ ಸೂಳೆಮಕ್ಕಳು ನಾವು ಅಂಗೆ ಮರೆ ಆದರೆ ಕಿಸಿ ಕಿಸಿ ಅಂತ ನಗ್ತವೆ. ಇನ್ನು ಮಕ್ಕಳ ಪಾಡು ಬಿಡಿ ಅವರ ಸಂಸಾರ ಅವರಿಗೆ. ಅವರ ಮಕ್ಕಳು, ಸ್ಕೂಲು ಅವರ ಲೇವಾದೇವಿ ಅಡಿಗೆ, ಗ್ಯಾಸಿಲ್ಲ, ಕರೆಂಟಿಲ್ಲ ಇವೆಲ್ಲಾ ಅನುಭವಿಸಬೇಕು ಹೇಳಿ. ಆಯ್ತು, ನಮ್ಮ ಕಾಲ ಅದೊಂದು ಹುಚ್ಚುಕಾಲ. ಒಂದು ಸೀಮೆಎಣ್ಣೆ ಟಿನ್ನು ಪೂರ್ತಿ ತುಪ್ಪ 4 ರೂ. ರೂಪಾಯಿಗೆ 32 ಸೇರು ರಾಗಿ. ಅವೆಲ್ಲಾ ಹೇಳೋದೇನೆ ಇರ್ಲಿ, ನಾನು ನನ್ನ ಮೊಮ್ಮಕ್ಕಳ ಹತ್ತಿರ ಇವೆಲ್ಲ ಹೇಳಿದರೆ ನಮ್ಮ ತಾತ ರೈಲು ಬಿಡ್ತಾ ಇದ್ದಾನೆ ಅಂತಾರೆ. ನಾನು ಬರ್ಲಾ ಅಂದ ಕೊನೆಗೂ ಕೊನೆಗೇ ಬಂದ, ಪಾಪ ಕೋಟು ಯಾವುದಾದರೂ ಕೊಡೋಣ ಅಂದರೆ ಈಗ ಯಾರು ಕೋಟು ಹೊಲಿಸ್ತಾರೆ. ನಾವು ಹಾಕ್ಕೊಂಡು ಹಳೆದಾದ್ರೆ ತಾನೆ ಅವನಿಗೆ ಕೊಡೋದು. ಮದುವೇದು ಮಾತ್ರ ಒಂದು ಸೂಟು ಇತ್ತು. ದಪ್ಪ ಉಲ್ಲನ್ನು ಹಿಮಾಲಯದಂಥ ಚಳೀಲಿ ಅದು ಕೆಲಸಕ್ಕೆ ಬರುತ್ತೋ ಏನೋ. ಆ ಕೋಟು ಕೊಡೋಣ ಅಂದರೆ ನನ್ನ ಹೆಂಡತಿ ನಮ್ಮ ಮದುವೆ ಸೂಟು ಅಂತ ಅಡ್ಡ ಬಂದಿದ್ದಳು. ಆಗಲಿ ಯಾವುದಾದರೂ ಹಳೇ ಶಾಲು ಕೊಡಬಹುದು ನಮ್ಮ ಆಫೀಸಿನಲ್ಲಿ ನನಗೆ ಪ್ರೊಮೋಷನ್ ಬಂದಾಗ ಹೊದಿಸಿದ್ದು ಅಂತ ಅಂದುಕೊಂಡು ಮುಂದಿನ ಭಾನುವಾರ ಮನೆಗೆ ಬಾರಯ್ಯ ಅಂದೆ. ಸಣ್ಣ ಪಾಕೇಟ್

ಬುಕ್‌ನಲ್ಲಿ ಮಹಂತಪ್ಪ ಏನೋ ಬರಕೊಂಡ. ಅದರಲ್ಲೆಲ್ಲಾ ಶಿಸ್ತು ಮುದುಕ. ಅವನಿಗೆ ದುಡ್ಡು ಕೊಡಬಾರದು ಬಡ್ಡೀಗೆ ಕೊಡ್ತಾನೆ ಅಷ್ಟೆ ಅಂತ, ಇದೇ ಸರಿ ಅಂದುಕೊಂಡೆ.

ಭಾನುವಾರ ಬೆಳಿಗ್ಗೇನೆ ನನ್ನ ಹೆಂಡತಿಗೆ ಹೇಳಿದೆ "ಇವತ್ತು ಒಬ್ಬ ಕಂಜೂಸ್ ಮುದುಕ ಹೈದರಾಬಾದ್ ನಿಜಾಮನ ತರಹ ಬರ್ತಾನೆ ಶರ್ಟು ಶಾಲು ತೊಗೊಂಡು ಹೋಗೋಕೆ" ಅಂತ. "ಸರಿ ನಿಮ್ಮ ಆಫೀಸಿನ ಕೋಟು ಮುದುಕ ತಾನೆ. ಮನೆ ಮಠ ಇಲ್ಲ, ಬಡ್ಡಿ ಹಣ ತುಂಬಿಟ್ಟುಕೊಂಡು ಯಾರಿಗೆ ಬಿಡ್ತಾನಂತೆ ಆಸ್ತಿ ಎಲ್ಲಾ" ಅಂತ ಅಂದಳು. ನಮಗೇನೆ ಅವನ ಸಂಸಾರ ಅವನ ಆಸ್ತಿ ನಾವೊಂದು ಹಳೇ ಶರ್ಟು ತಾನೆ ಕೊಡೋದು ನಮುಗ್ಯಾಕೆ ಅವೆಲ್ಲ ಅಂತ ಅಂತಿದ್ದ ಹಾಗೆ ಮಹಂತಪ್ಪ ಹಾಜರಾದ. ಲಕ್ಷಣವಾಗಿ ಬಿಳಿ ಪೈಜಾಮ ಕೋಟು ಟೋಪಿ ಹಾಕ್ಕೊಂಡು ತೆಳ್ಳಗೆ ಬಿಳಿ ಗಡ್ಡ ಬಿಟ್ಟುಕೊಂಡು ಒಳ್ಳೆ ಸಾಧು ಸಂತರ ತರಹ ಕಂಡ. ನಾನು ಒಳಗಿಂದ ನನ್ನ ಹಳೇ ಶಾಲು ಸಂಕೋಚದಿಂದ ತಂದು ಅವನಿಗೆ ನಾಟಕೀಯವಾಗಿ ಹೊದಿಸಿದೆ ಎಷ್ಟೇ ಆಗಲಿ ನನಗಿಂತ ಹಿರಿಯ ಅಲ್ಲವೇ ಅಂತ. ಜೇಬಿನಿಂದ ಏನೋ ಕವರು ತೆಗೆದು ಮಹಂತಪ್ಪ ಹೇಳಿದ "ಸ್ವಾಮಿ ನೀವು ಅದ್ಯಾವುದೋ ಸ್ಕೂಲು ನಡಿಸ್ತೀರಲ್ಲ. ಬುದ್ಧಿ ಕಮ್ಮಿ ಇರೋ ಮಕ್ಕಳಿಗೆ ಮಾತಾಡೋದು ಹಾಡೋದು ನಡೆಯೋದು ಎಲ್ಲಾ ಮಾಡಿಸ್ತೀರಲ್ಲ ಅದಕ್ಕೆ ನನ್ನದು ಸ್ವಲ್ಪ ಕಾಣಿಕೆ. ಏನೋ ಆ ಮಕ್ಕಳಾದರೂ ಓದಿಕೊಳ್ಳಿ. ಈ ನನ್ಮಗ ಮದುವೆ ಆಗ್ಲಿಲ್ಲ ಮಕ್ಕಳಿಲ್ಲ. ನಾನು ಇನ್ನು ಯಾರಿಗೆ ಇಟ್ಟು ಹೋಗಲಿ" ಅಂದ. ನನಗೆ ಭೂಮಿ ಬಾಯಿ ಬಿಟ್ಟಂಗಾಯಿತು. ಮಹಂತಪ್ಪ ಹಣ ಇಷ್ಟು ಸುಲಭವಾಗಿ ಯಾರಿಗಾದರೂ ಅದೂ ಬಡ್ಡಿ ಅಸಲಿಗೇ ಜೋತಾ ಮಾಡಿಕೊಂಡು ಕೊಡ್ತಾನೆ ಅಂದರೆ ನನಗೆ ನಂಬೋದಕ್ಕೆ ಕಷ್ಟವಾಯಿತು. ಕವರು ಬಿಚ್ಚಿ ನೋಡಿದರೆ 10001 ರೂಪಾಯಿಗೆ ಬ್ಯಾಂಕ್ ಡಿಡಿ. ಎಲ್ಲಾ ಸರಿಯಾಗಿದೆ. ಆದರೆ ನಂಗೇ ಸರಿಯಾಗಿ ತೋಚ್ತಾ ಇಲ್ಲ.

ಮಹಂತಪ್ಪ ಮತ್ತು ನಾನು ಹೊದಿಸಿದ್ದ ಹಳೇ ಶಾಲು ಮಾತ್ರ ಮುಸುಕು ಮುಸುಕಾಗಿ ಕಾಣ್ತಾ ಇತ್ತು ನನ್ನ ನೀರು ಕಣ್ಣಿಗೆ.

ಸಾಹಿತ್ಯ ಅದೊಂದು ಮಾನಸಿಕ ಸುಧಾರಣೆಯ ಸಾಧನ ಸಾಹಿತ್ಯ ಸಮಾಜದ ಅಭ್ಯುದಯಕ್ಕಾಗಿ ದುಡಿಯುವಂತಾಗಬೇಕು.

*ಶ್ರೀಮತಿ ಗೀತಾ ನಾಗಭೂಷಣ*

# ಎಚ್.ಎಸ್. ವೆಂಕಟೇಶಮೂರ್ತಿಯವರ ಕೃತಿಗಳು

**ಮುಖ್ಯ ಕಾವ್ಯಕೃತಿಗಳು :**

- ಸಿಂದಾಬಾದನ ಆತ್ಮಕಥೆ (1977)
- ಕ್ರಿಯಾಪರ್ವ (1980)
- ಒಣಮರದ ಗಿಳಿಗಳು (1981)
- ಋತುವಿಲಾಸ (1988)
- ಎಷ್ಟೊಂದು ಮುಗಿಲು (1990)
- ಅಮೇರಿಕಾದಲ್ಲಿ ಬಿಲ್ಲುಹಬ್ಬ (1997)
- ವಿಮುಕ್ತಿ (1998)
- ಭೂಮಿಯೂ ಒಂದು ಆಕಾಶ (2000)
- ನದಿತೀರದಲ್ಲಿ (2004)
- ಮೂವತ್ತು ಮಳೆಗಾಲ-ಸಮಗ್ರ ಕಾವ್ಯ (2001)

**ಮುಖ್ಯ ನಾಟಕ ಕೃತಿಗಳು :**

- ಹೆಜ್ಜೆಗಳು (1981)
- ಒಂದು ಸೈನಿಕ ವೃತ್ತಾಂತ (1993)
- ಕತ್ತಲೆಗೆ ಎಷ್ಟು ಮುಖ ? (ಏಕಾಂಕಗಳು) (1999)
- ಚಿತ್ರಪಟ-ಅಗ್ನಿವರ್ಣ-ಉರಿಯ ಉಯ್ಯಾಲೆ (1999)
- ಕಂಸಾಯಣ-ಊರ್ಮಿಳಾ-ಮಂಥರಾ (2003)
- ಮೇಘಮಾನಸ (ಗೀತರೂಪಕ) (2004)

**ಮುಖ್ಯ ಮಕ್ಕಳ ಕೃತಿಗಳು :**

- ಹಕ್ಕಿಸಾಲು (ಕವಿತೆಗಳು (1987)
- ಹೂವಿನ ಶಾಲೆ (ಕವಿತೆಗಳು (1997)
- ಸೋನಿ ಪದ್ಯಗಳು (ಕವಿತೆಗಳು (2001)
- ಅಳಿಲು ರಾಮಾಯಣ ಮತ್ತು ಸುಣ್ಣದ ಸುತ್ತು (ನಾಟಕಗಳು 2002)
- ಹೂವಿ ಮತ್ತು ಸಂಧಾನ (ನಾಟಕಗಳು 2003)
- ಮುದಿದೊರೆ ಮತ್ತು ಮೂವರು ಮಕ್ಕಳು (ನಾಟಕ-ಅಚ್ಚಿನಲ್ಲಿ)

**ಮುಖ್ಯ ಪ್ರಶಸ್ತಿ-ಪುರಸ್ಕಾರಗಳು :**

- ಐದು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1977, 1985, 1986, 1993, 1997)
- ಋತುವಿಲಾಸ ಎಂಬ ಅನುವಾದಿತ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪುರಸ್ಕಾರ (1998)

- ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ (2003)
- ದೇವರಾಜ ಬಹಾದ್ದೂರ ಪ್ರಶಸ್ತಿ (1978)
- ದಿನಕರದೇಸಾಯಿ ಪ್ರತಿಷ್ಠಾನ ಪ್ರಶಸ್ತಿ (1985)
- ಬಿ. ಎಚ್. ಶ್ರೀಧರ ಪ್ರಶಸ್ತಿ (1990)
- ಆರ್ಯಭಟ ಪ್ರಶಸ್ತಿ (1993)
- ಮೈಸೂರು ಅನಂತಸ್ವಾಮಿ ಪ್ರಶಸ್ತಿ (1997)
- ಅಖಿಲ ಭಾರತ ಆಕಾಶವಾಣಿ ಪ್ರಶಸ್ತಿ (ಎರಡು ಬಾರಿ - 1995, 2000)
- ಡಿ.ವಿ.ಜಿ. ಪ್ರಶಸ್ತಿ (2004)
- ಅರುವತ್ತು ತುಂಬಿದ ಸಂದರ್ಭದಲ್ಲಿ ಗಂಧವ್ರತ ಅಭಿನಂದನ ಗ್ರಂಥದ ಸಮರ್ಪಣೆ (2004)
- ಅರುವತ್ತು ಮಳೆಗಾಲ (ಸಾಕ್ಷಿಚಿತ್ರ) - ನಿರ್ಮಾಣ : ಎಚ್ಚೆಸ್ವಿ ವಿದ್ಯಾರ್ಥಿ ಬಳಗ (2004)

**ಸಮೂಹ ಮಾಧ್ಯಮಗಳಲ್ಲಿ :**

## ಚಲನಚಿತ್ರಗಳು

- ಚಿನ್ನಾರಿಮುತ್ತ (ಕಥೆ, ಸಂಭಾಷಣೆ, ಹಾಡುಗಳು)- ನಿರ್ದೇಶನ ನಾಗಾಭರಣ
- ಕೊಟ್ರೇಶಿ ಕನಸು (ಹಾಡುಗಳು) - ನಿರ್ದೇಶನ ನಾಗತಿಹಳ್ಳಿ ಚಂದ್ರಶೇಖರ್
- ಕ್ರೌರ್ಯ (ಸಂಭಾಷಣೆ) - ನಿರ್ದೇಶನ ಗಿರೀಶ್ ಕಾಸರವಳ್ಳಿ
- ಕೊಟ್ಟ (ಸಂಭಾಷಣೆ, ಹಾಡುಗಳು) - ನಿರ್ದೇಶನ ಎಂ.ಎಸ್. ಸತ್ಯು
- ಮತದಾನ (ಹಾಡು) - ನಿರ್ದೇಶನ ಟಿ.ಎನ್. ಸೀತಾರಾಮ್

## ದೂರದರ್ಶನ ಧಾರಾವಾಹಿಗಳು

- ಮುಕ್ತ (ಶೀರ್ಷಿಕೆಯ ಗಿತೆ)
- ಯಾವಜನ್ಮದ ಮೈತ್ರಿ (ಶೀರ್ಷಿಕೆಯ ಗೀತೆ)
- ಸವಿಗಾನ (ಶೀರ್ಷಿಕೆಯ ಗೀತೆ)
- ಚಿತ್ರಶಾಲೆ (ನಿರ್ದೇಶನ)

## ಧ್ವನಿಸುರುಳಿಗಳು

- ಬಣ್ಣದ ಹಕ್ಕಿ (ಮಕ್ಕಳ ಗೀತೆಗಳು) - ಸಂಗೀತ ಸಿ. ಅಶ್ವಥ್
- ಅನಂತನಮನ (ಭಾವಗೀತೆಗಳು) - ಸಂಗೀತ ಮೈಸೂರು ಅನಂತಸ್ವಾಮಿ
- ತೂಗುಮಂಚ (ಭಾವಗೀತೆಗಳು) - ಸಂಗೀತ ಸಿ. ಅಶ್ವಥ್
- ಸುಳಿಮಿಂಚು (ಭಾವಗೀತೆಗಳು) - ಸಂಗೀತ ಉಪಾಸನಾ ಮೋಹನ್
- ಅಪೂರ್ವರತ್ನ (ಭಾವಗೀತೆಗಳು) - ಸಂಗೀತ ಎನ್.ಎಸ್. ಪ್ರಸಾದ್
- ಭಾವಭೃಂಗ (ಭಾವಗೀತೆಗಳು) - ಸಂಗೀತ ಉಪಾಸನಾ ಮೋಹನ್

# ಕಾರಂತ ಚೇತನಕೆ....

- ಡಾ. ಅನಸೂಯಾ ದೇವಿ

ಸಿರಿದೇವಿ ಕರುನಾಡ ತಾಯಿಯ ಒಡಲು
ಮೊರೆಮೊರೆವ ದಕ್ಷಿಣ ಕನ್ನಡದ ಕಡಲು
ಓವ್ಹೋ ! ಸಾಹಿತ್ಯದಲೆಗಳ ಭೋರ್ಗರೆತ
ಭಾಗವತಿಕೆ, ಚಂಡೆ ! ಮದ್ದಳೆ ! ಕುಣಿತ....

ಮೂಡಿತಲ್ಲಿ ಮೆರೆವೊಂದು ವ್ಯಕ್ತಿತ್ವ
ಅಸಾಮಾನ್ಯ ಮೋಡಿ ! ಏನೆಂಥ ಕರ್ತೃತ್ವ !
ಹಡೆದ ಕನ್ನಡಮ್ಮನ ಮಡಿಲು ಧನ್ಯ !
ಪರಶುರಾಮನ ಅವತರಣಿಕೆ ಅನನ್ಯ....

ಕನ್ನಡಿಗರ ತಪಸು ಫಲಿಸಿದ ಪುಣ್ಯಮೂರ್ತಿ
ಕಡಲ ತೀರದ ಭಾರ್ಗವನ ವಿಶ್ವಕೀರ್ತಿ
ಕನ್ನಡದ ಕೋಟ ಶಿವರಾಮ ಕಾರಂತ
ಕರಾವಳಿಯ ಪ್ರಭಾವಳಿ ವಾಙ್ಮಯ ಧೀಮಂತ...

ನೇರ ನಿಲುವಿನ ನಿರ್ದಾಕ್ಷಿಣ್ಯ ಪರತೆ
ಸ್ಪಷ್ಟ ಅಭಿವ್ಯಕ್ತಿ ಶಿಸ್ತು ಖಚಿತತೆ
ಅಂತರಂಗದಿ ಹರಿವ ಝರಿ ಮಾನವೀಯತೆ
ಕಾರಂತ ವಿಶಿಷ್ಟವದು ಚುಂಬಕ ಪರವಶತೆ...

ತೊಂಬತ್ತರ ಹರೆಯದಲು ಗೆಜ್ಜೆ ಕಟ್ಟಿದ ಹೆಜ್ಜೆ
ಕನ್ನಡದ ಕಿರೀಟಕೆ ಕಾದಂಬರಿಗಳ ಒಜ್ಜೆ...!
ಧಿಮಿಕಿಟ ಕುಣಿದ ರಿಂಗಣ ಯಕ್ಷಗಾನ ತೂರ್ಯ
ಜ್ಞಾನ ಪೀಠದಿ ರಾಜಿಸಿದ ಜ್ಞಾನ ನಿಧಿ ಸೂರ್ಯ....

ಬಾಳ್ವೆಯೇ ಬೆಳಕೆಂದು ಬಾಳಿ ತೋರಿಸಿದಾತ
ವಿಶ್ವಕೋಶ ವಿಜ್ಞಾನ ಪ್ರಪಂಚದ ಸುಸಂಸ್ಕೃತ
ಕಾರಂತ ಚೇತನಕಿದೋ ನುಡಿನಮನ
ಹೃದಯ ಚಿಲುಮೆಯಲುದಿಸಿದ ಈ ಕವನ....

# ಎಚ್ ಎಸ್ವಿ ಅವರ ಕಾವ್ಯ ಮತ್ತು ಸ್ವಧರ್ಮದ ಹುಡುಕಾಟ

*- ಎಸ್.ಆರ್. ವಿಜಯಶಂಕರ*

ಸ್ವಧರ್ಮದ ಹುಡುಕಾಟದಲ್ಲಿ ಸ್ವಾನುರಕ್ತರಾಗದೆ ಸ್ವಂತಿಕೆ ಉಳಿಸಿಕೊಂಡ ಕಾವ್ಯ ಡಾ. ಎಚ್.ಎಸ್. ವೆಂಕಟೇಶ ಮೂರ್ತಿ ಅವರದ್ದು. ಸ್ವಾನುರಕ್ತರಾಗದೇ ಇರುವುದರಿಂದಲೇ ಅವರು ಸಮಾಜಮುಕ್ತರೂ ಅಲ್ಲ. ಎಚ್.ಎಸ್.ವಿ. ಅವರಲ್ಲಿ, ಸ್ವಂತಿಕೆಯ ಪರಿಭಾವನೆ ಸ್ವಧರ್ಮದ ಹುಡುಕಾಟವಾಗಿ ಬೆಳೆಯಿತು. ಕಳೆದ ನಾಲ್ಕು ದಶಕಗಳಲ್ಲಿ ನಿರಂತರವಾಗಿ ಕಾವ್ಯದ ಮೂಲಕ ಸಾಂಸ್ಕೃತಿಕ ಸಾಹಿತ್ಯವನ್ನು ಸಂಗೋಪಿಸಿದ ಕವಿ ಅವರು. 'ಪರಿವೃತ್ತ' ಎಂಬ ಮೊದಲ ಸಂಕಲನ 1968ರಲ್ಲಿ ಪ್ರಕಟವಾದ ಬಳಿಕ ಈ ತನಕ ಅವರ ಹದಿನೈದು ಕವನ ಸಂಕಲನಗಳು ಪ್ರಕಟವಾಗಿವೆ. ಅವಲ್ಲದೆ ಗೀತಗಳು, ಮಕ್ಕಳ ಪದ್ಯಗಳು ಹಾಗೂ ಅವರ ಕಾವ್ಯಾನುಸಂಧಾನದ ಇತರ ರೂಪಗಳಂತೆ ಪ್ರಕಟವಾದ ಕಾವ್ಯಾನುವಾದಗಳು, ನಾಟಕಗಳೂ ಇವೆ. ಜೊತೆಗೆ ಅವರು ಸಂಶೋಧನೆ, ವಿಮರ್ಶೆ, ಸಣ್ಣಕತೆ, ಕಾದಂಬರಿ, ಮಕ್ಕಳ ಕಾದಂಬರಿಗಳು, ಅಂಕಣ ಬರಹ, ಸಂಪಾದನೆ-ಹೀಗೆ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ನಿರಂತರ ವ್ರತದಂತೆ, ಸ್ವಯಂ ಪ್ರವೃತ್ತರಾಗಿ, ತೊಡಗಿಕೊಂಡಿದ್ದಾರೆ. ಪ್ರಧಾನವಾಗಿ ಕಾವ್ಯದ ಮೂಲಕ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಕಳೆದ ನಾಲ್ಕು ದಶಕಗಳಿಂದ ತನ್ಮಯರಾಗಿರುವ ಕವಿಗೆ ಕಾವ್ಯಾಸಕ್ತನಾಗಿ ಈ ಸಮಗ್ರಕಾವ್ಯ ಹೊರಬರುತ್ತಿರುವ ಸಂದರ್ಭದಲ್ಲಿ ನನ್ನ ಕೃತಜ್ಞತೆಗಳು; ಅಭಿನಂದನೆಗಳು.

ಕಳೆದ ನಾಲ್ಕು ದಶಕಗಳಲ್ಲಿ ನವೋದಯ, ನವ್ಯ, ದಲಿತ, ಬಂಡಾಯ ಹಾಗೂ ನವ್ಯೋತ್ತರ ಕಾವ್ಯ ವಿಚಾರಗಳಿಂದ ಪ್ರೇರಿತವಾದ ಕನ್ನಡ ಕಾವ್ಯವಿಮರ್ಶೆ ನಿರಂತರವಾಗಿ ಎಚ್.ಎಸ್.ವಿ ಅವರ ಕಾವ್ಯವನ್ನು ಒರೆಗೆ ತಿಕ್ಕುತ್ತಾ ಬಂದಿದೆ. ಅವರ ಕಾವ್ಯ ಮುಖ್ಯವಾದ್ದು ಹೌದೋ ಅಲ್ಲವೋ ? ಕನ್ನಡ ಕಾವ್ಯಕ್ಕೆ ಅವರ ಕೊಡುಗೆ ಏನು? ಅವರ ಕಾವ್ಯವನ್ನು ಹಾಗೂ ಕವಿಯಾಗಿ ಅವರ ಕೊಡುಗೆಯನ್ನು ಯಾವ ರೀತಿ ಪರಿಗಣಿಸಬೇಕು ? ಅವರು ಸಮಾಜಮುಖಿ ಹೌದೆ?- ಇತ್ಯಾದಿ ಚರ್ಚೆಗಳಾಗಿವೆ.

ಸಾಮಾಜಿಕ ಬದ್ಧತೆ ಬಗ್ಗೆ ನಾವೆಲ್ಲ ಇಷ್ಟು ಮಾತಾಡಿರುವಾಗ ಸಾಂಸ್ಕೃತಿಕ ಬದ್ಧತೆ ಬಗೆಗೂ ಮಾತಾಡಬೇಕಾದ ಕಾಲ ಈಗ ಬಂದಿದೆ. ಸಾಂಸ್ಕೃತಿಕ ಬದ್ಧತೆ ಸಮಾಜ ಹಾಗೂ ವ್ಯಕ್ತಿ ಎರಡೂ ನೆಲೆಗಳನ್ನು ಒಳಗೊಳ್ಳುವ ಕ್ರಮಗಳನ್ನು ವಿಸ್ತರಿಸಿ

ವಿವರಿಸಿಕೊಳ್ಳಬೇಕಾದ ಅನಿವಾರ್ಯ ಕಾಲಘಟ್ಟದಲ್ಲಿ ಈಗ ನಾವಿದ್ದೇವೆ. ಹೊಸ ಅಕ್ಷರಸ್ಥರು ಹಾಗೂ ಹೊಸ ಮಾಧ್ಯಮಗಳ ಪ್ರಭಾವ ಬೆಳೆಯುತ್ತಾ ಮಾಹಿತಿಯೇ ಮಹತ್ವಾದ್ದು ಎಂಬ ನಂಬಿಕೆಯಲ್ಲಿ ಕಾವ್ಯ ಕಡೆಗಣಿಸಲ್ಪಡುತ್ತಿರುವ ಈ ಸಂದರ್ಭದಲ್ಲಿ ಕವಿಯಾಗಿ ಸಾಂಸ್ಕೃತಿಕ ಸಾತತ್ಯವನ್ನು ತನ್ನ ಅನಿವಾರ್ಯ ಜವಾಬ್ದಾರಿ ಎಂಬಂತೆ ಹೊರಬಯಸುವ ಗಂಭೀರ ಕವಿಯೊಬ್ಬ ಖಂಡಿತವಾಗಿ ಕನ್ನಡಿಗರಿಗೆ ಮುಖ್ಯನಾಗುತ್ತಾನೆ ಎಂಬುದು ನನ್ನ ನಂಬುಗೆ.

ಎಚ್.ಎಸ್.ವಿ. ಅವರಿಗೆ ಒಂದು ಕಾವ್ಯ ಪ್ರವೃತ್ತಿ ಇದೆ. ಅದು ರಮ್ಯತೆಗೆ ವಿರುದ್ಧವಾದ್ದಲ್ಲ. ಆದರೆ ಅವರ ಕಾವ್ಯಕ್ಕೆ ಭಾವ ಶಕ್ತಿಯ ಮಿತಿಗಳೇನು ಎಂಬ ಅರಿವಿದೆ. ಹಾಗೆಂದು ಅವರ ಕಾವ್ಯ ಕೇವಲ ಬೌದ್ಧಿಕತೆಗೆ ಮಾರುಹೋದದ್ದೂ ಅಲ್ಲ. ಅದು ಮನುಷ್ಯ ಸಹಜ ನೋವು ನಲಿವುಗಳನ್ನು ಕಾವ್ಯದ ಮೂಲಕ ಹಂಚಿಕೊಳ್ಳಲು ಸಾಧ್ಯ ಎಂಬ ನಂಬುಗೆ ಉಳ್ಳದ್ದು. ಜಾನಪದ ಕವಿಯೊಬ್ಬ ಬಾಯಿಮಾತಲ್ಲಿ ಹೇಗೆ ಹೇಳಬಲ್ಲನೋ ಹಾಗೇ ಶಿಷ್ಟ ಕವಿಯೊಬ್ಬ ಮನುಷ್ಯ ಸಹಜ ಪ್ರವೃತ್ತಿಯನ್ನು ಕಾವ್ಯದ ಮುಖೇನ ಹಂಚಿಕೊಳ್ಳಬಲ್ಲ. ಬದುಕಿನ ಅಂತರಾರ್ಥವನ್ನು ನಿರಂತರ ಶೋಧದಲ್ಲಿ ಬಗೆಯುವುದು ಮಾತ್ರ ಕಾವ್ಯದ ಮೂಲಧರ್ಮ ಎಂದು ನಂಬಿದವರು ಅವರಲ್ಲ. ಬದುಕಿನ ಬಣ್ಣಗಳಿಗೆ, ರಸ ಭಾವ ಬುದ್ಧಿಗಳ ಪ್ರವೃತ್ತಿ ಸಹಜವಾದ ಅಭಿವ್ಯಕ್ತಿಗೆ ಕಾವ್ಯ ಒದಗಿ ಬರಬೇಕು ಎಂಬ ಅಪೇಕ್ಷೆ, ನಂಬುಗೆ ಎರಡೂ ಅವರಲ್ಲಿವೆ. ಹಾಡುವುದಕ್ಕೆ, ಹಿಗ್ಗುವುದಕ್ಕೆ, ವಿಲಾಪಕ್ಕೆ, ಅರಿವಿನ ಆಳಕ್ಕೆ ಇಳಿಯುವುದಕ್ಕೆ, ಚಿಂತನೆಗೆ ಎಲ್ಲದಕ್ಕೂ ಅವರಿಗೆ ಕಾವ್ಯ ಬೇಕು. ಕಾವ್ಯ ಕೇವಲ ಆತ್ಮಶೋಧದ ಮಾರ್ಗವಲ್ಲ. ಅದೊಂದು ಮಾಧ್ಯಮವೂ ಹೌದು ಎಂದು ನಂಬಿದ ಕವಿ ಅವರು. ಹಾಗಾಗಿ ಇತ್ತೀಚೆಗಿನ ಒಂದು ಸಂದರ್ಶನದಲ್ಲಿ ಅವರು (ಕನ್ನಡಪ್ರಭ - 29.06.2009) ಕವನ ಬರೆಯುವ ಮನೋಧರ್ಮದ ಬಗ್ಗೆ "ಮನಸ್ಸು ಪ್ರಸನ್ನವಾಗಿದ್ದಾಗ ರಮ್ಯಕವನಗಳು ಮೂಡುತ್ತವೆ. ಮನಸ್ಸು ಕಲಕಿದಾಗ ಗಹನವಾದ ಗಂಭೀರ ಕವನಗಳು ಮೂಡುತ್ತವೆ. ಆಗ ಹಾಡುವ ಮನಸ್ಥಿತಿಯಿರುವುದಿಲ್ಲ" ಎಂದು ಹೇಳಿದರು.

ಪ್ರಸನ್ನತೆ ಹಾಗೂ ಕಲಕುವಿಕೆ ಎರಡನ್ನೂ ಒಂದೇ ಸತ್ಯದ ಶೋಧನೆಯಲ್ಲಿ ಬಳಸಬೇಕು, ಬದುಕಿನಲ್ಲಿ ಅದು ಪ್ರತ್ಯೇಕವಾದದ್ದಲ್ಲ ಎಂದು ತಿಳಿದವರು ಬೌದ್ಧಿಕತೆಗೆ ಹಾಗೂ ತತ್ವಜ್ಞಾನಕ್ಕೆ ಮಾರು ಹೋದವರು. ಅದನ್ನೇ ನಂಬಿದ ಕಾವ್ಯ ಸಾತತ್ಯಕ್ಕಾಗಿ ಪರಂಪರೆಯ

ಆವಾಹನೆಯನ್ನು ಬೌದ್ಧಿಕ ಪ್ರಖರತೆಯಲ್ಲಿ ಕರಗಿಸಿಕೊಂಡು ಮುಂದುವರಿಯಬೇಕಾಯಿತು. ಅಲ್ಲಿ ನಮಗಿರುವ ಆಯ್ಕೆ ಬದುಕಿನ ಸತ್ಯವನ್ನು ಆಳವಾಗಿ ಶೋಧಿಸುವುದೊಂದೇ ಎಂದು ಕನ್ನಡ ನವ್ಯ ಕಾವ್ಯ ತಿಳಿಯಿತು. ಅವರಲ್ಲಿ ಪ್ರಮುಖರಾದ ಕವಿ ಗೋಪಾಲಕೃಷ್ಣ ಅಡಿಗರ ನೇರ ಪ್ರಭಾವಕ್ಕೆ ಒಳಗಾಗಿಯೂ ಅಲ್ಲಿಂದ ಬೇರಾಗುವುದೇ ತನ್ನ ಸಹಜ ಕಾವ್ಯ ಪ್ರವೃತ್ತಿ ಎಂಬ ಪ್ರಯೋಗಗಳಲ್ಲಿ ಎಚ್.ಎಸ್.ವಿ ತೊಡಗಿದರು.

ಮನುಷ್ಯ ಚೈತನ್ಯಕ್ಕೆ ಮಿತಿ ಇದೆ ಎಂಬ ಅಭಿಜಾತ ಮನೋನಿರ್ಮಿತಿಗಿಂತ ಬೇರೆಯಾದರೂ ರೊಮ್ಯಾಂಟಿಕ್ ಕಾವ್ಯ ಪ್ರಕೃತಿಯೊಂದಿಗಿನ ಭಾವ ಸಂಬಂಧಗಳ ಮೂಲಕ ಬ್ರಹ್ಮಾಂಡದ ಸತ್ಯ, ಸತ್ವಗಳ ಅನ್ವೇಷಣೆಗೆ ತೊಡಗಿತು. ಅಂತಹ ಕಾವ್ಯ ಮನೋಭಾವದ ಕನ್ನಡದ ಪ್ರಮುಖ ಪ್ರತಿನಿಧಿಯಾದ ವರಕವಿ ಬೇಂದ್ರೆಯವರ ಪ್ರಮುಖ ಆಕರ್ಷಣೆಯಿದ್ದೂ ಅಲ್ಲಿಂದ ಬೇರಾಗುವುದು ಅನಿವಾರ್ಯ ಎಂಬ ಸ್ಪಷ್ಟತೆಯೊಂದಿಗೆ ಎಚ್.ಎಸ್.ವಿ ಇನ್ನೊಂದಷ್ಟು ಪ್ರಯೋಗ ಮಾಡಿದರು.

ಎಚ್.ಎಸ್.ವಿ. ಮೂಲತಃ ಅಭಿಜಾತ ಮನೋಧರ್ಮಕ್ಕೆ ಸೇರಿದವರಾದರೂ ನೋವು ನಲಿವುಗಳ ಭಾವದ ಉನ್ಮೀಲನೆಯಲ್ಲಿ ಕೇವಲ ಅಭಿಜಾತ ಚೌಕಟ್ಟಲ್ಲಿ ಉಳಿಯಲಾರದೆ ಹೋದರು. ಭಾವದ ಉತ್ಕರ್ಷ ಬದುಕಿನ ಸರ್ವ ಸಂಘರ್ಷಕ್ಕೂ ಸಾಲದು ಎಂಬ ತಿಳುವಳಿಕೆಯಲ್ಲಿ ನವೋದಯದ ಬದುಕನ್ನು ಪ್ರವೇಶಿಸುವ ಮೂಲ ಗುಣವನ್ನು ಬಿಟ್ಟುಕೊಟ್ಟರು. ಬೌದ್ಧಿಕ ಶೋಧವೊಂದೇ ಅನುಭವವನ್ನು ಸಾಕ್ಷಾತ್ಕರಿಸಿಕೊಳ್ಳುವ ಮಾರ್ಗವಲ್ಲ ಎಂಬ ಅರಿವಿನಲ್ಲಿ ನವ್ಯದ ಕಾವ್ಯಕರ್ಮಕ್ಕಿಂತ ಬೇರೆಯಾದರು. ಬದುಕಿನಲ್ಲಿ ಬಂಡಾಯ ಯಾವುದು ? ಎಂದು ವೈಯಕ್ತಿಕ ನೆಲೆಯಲ್ಲಿ ಸಮಾಜಮುಖಿಯಾದ್ದರಿಂದ ದಲಿತ-ಬಂಡಾಯ ಕಾವ್ಯದ ದಟ್ಟ ಪ್ರವಾಹ ಕಾಲದಲ್ಲಿ ದಡದಲ್ಲಿ ನಿಂತ ವೀಕ್ಷಕರಾದರು. ನವ್ಯೋತ್ತರದ ಪ್ರಯೋಗಶೀಲತೆಯನ್ನು ಭಾಷೆಯ ನೆಲೆಗಳಲ್ಲಿ ಆವಾಹಿಸಿಕೊಂಡು ವಿಘಟನೆಯ ಭೇದದಿಂದ ಹೊರಗುಳಿದರು.

ಈ ಎಲ್ಲಾ ಸಂದರ್ಭದಲ್ಲೂ ಕವಿಯಾಗಿ ಎಚ್.ಎಸ್.ವಿ. ಸ್ವಂತಿಕೆಯ ಹುಡುಕಾಟ ಹಾಗೂ ಸ್ವಧರ್ಮದ ಶೋಧದಲ್ಲಿ ತೊಡಗಿದ್ದರು. ಈ ಶೋಧದಲ್ಲಿ ಅವರು ಆತುಕೊಂಡದ್ದು ಕಾವ್ಯದೊಳಗಿನ ಕಥನಕ್ರಮಕ್ಕೆ. ಬೇಂದ್ರೆ, ಅಡಿಗರ ಪ್ರಭಾವದಿಂದ ಬೇರಾಗುವ ಪ್ರಯತ್ನದಲ್ಲಿ ಅವರು ಸಮೀಪವಾದದ್ದು ಪು.ತಿ.ನ ಹಾಗೂ ಕೆ.ಎಸ್.ನ

ಅವರ ಕಾವ್ಯಕ್ಕೆ. ಜಾನಪದ ಹಾಗೂ ಮತ್ತಿತರ ಕತೆಗಳಾಚೆ ಅವರ ಶೋಧಕ್ಕೆ ಒದಗಿಬಂದದ್ದು ರಾಮ ಹಾಗೂ ಕೃಷ್ಣರ ಪೌರಾಣಿಕ ಕಥೆಗಳ ಆಧುನಿಕ ವಿಶ್ಲೇಷಣೆ. ಇವೆಲ್ಲದರ ಮೂಲಕ ಅವರು ವ್ಯಕ್ತಿ, ಸಮಾಜ ಮತ್ತು ಈಚಿನ ಕಾವ್ಯಗಳಲ್ಲಿ ಸಂಸಾರ - ಈ ಮೂರೂ ಸೇರಿ ಅರ್ಥಪೂರ್ಣವಾಗುವ ಕ್ರಮ ಹೇಗೆ ? ಹಾಗೂ ಆ ಬಳಿಕ ತಲುಪಬಹುದಾದ ಆಧ್ಯಾತ್ಮಿಕ ನೆಲೆಗಳು ಯಾವುವು ಎಂದು ಧ್ಯಾನಿಸಲು ತೊಡಗಿದ್ದಾರೆ. (ಇತ್ತೀಚೆಗೆ ಬಿಡುಗಡೆಯಾದ ಎಚ್ಚೆಸ್ವಿಯ ಸಮಗ್ರ ಕವಿತೆಗಳು - ಗ್ರಂಥಕ್ಕೆ ಬರೆದ ಮುನ್ನುಡಿಯ ಆಯ್ದ ಭಾಗ.)



ಹೊಸಗನ್ನಡ ಕಾವ್ಯಸಂದರ್ಭದ ನವ್ಯೋತ್ತರ ಕಾಲಮಾನದಲ್ಲಿ ಕನ್ನಡ ಕಾವ್ಯಲೋಕವನ್ನು ಪ್ರವೇಶಿಸಿದ ಡಾ|| ಎಚ್.ಎಸ್. ವೆಂಕಟೇಶಮೂರ್ತಿಯವರ ಕವಿತೆ ಈ ಮೂವತ್ತು ಮಳೆಗಾಲದಲ್ಲಿ ಪಡೆದುಕೊಂಡ ಸಮೃದ್ಧಿಯನ್ನು, ವೈವಿಧ್ಯವನ್ನು, ಪ್ರಯೋಗಶೀಲತೆಯನ್ನು ಮತ್ತು ನಾವೀನ್ಯತೆಯನ್ನು ಅವರ ಸಮಕಾಲೀನರಾದ ಇನ್ನಿತರ ಯಾವ ಕವಿಗಳೂ ಇಷ್ಟರ ಮಟ್ಟಿಗೆ ಪಡೆದುಕೊಳ್ಳಲಿಲ್ಲ ಎಂದರೆ ಅದು ಉತ್ಪ್ರೇಕ್ಷೆಯ ಮಾತೇನೂ ಅಲ್ಲ. ಅಭಿಜಾತ ಮತ್ತು ಆಧುನಿಕ ಕಾವ್ಯಪರಂಪರೆಯೊಂದಿಗೆ ನಿರಂತರ ಸಂವಾದ ಹಾಗೂ ಅನುಸಂಧಾನಗಳನ್ನು ನಡೆಯಿಸುತ್ತಾ, ಕಾವ್ಯಪ್ರಯೋಗ ಪರಿಣತಮತಿಯಾದ ಸೃಜನಶೀಲತೆಗೆ ಮಾತ್ರ ಈ ಬಗೆಯು ಯಶಸ್ಸು ಸಾಧ್ಯ. ಈ ಗೆಲುವಿನ ಹಾದಿಯಲ್ಲಿ ವೆಂಕಟೇಶಮೂರ್ತಿಯವರ ಕಾವ್ಯಸಾಮರ್ಥ್ಯ ಕನ್ನಡದ ಪ್ರಧಾನ ಧಾರೆಯಾದ ಕಥನಕ್ಕೆ ವಿವಿಧ ಕಾವ್ಯಪ್ರಕಾರಗಳ ಮೂಲಮಾನದಲ್ಲಿ ತಂದುಕೊಟ್ಟ ಆಯಾಮಗಳು ಅವರನ್ನು ಈ ಕಾಲದ ಮಹತ್ವದ ಜನಪ್ರಿಯ ಕವಿಗಳಲ್ಲಿ ಒಬ್ಬರನ್ನಾಗಿ ಮಾಡಿದೆ.

**ಡಾ|| ಜಿ.ಎಸ್. ಶಿವರುದ್ರಪ್ಪ**

ಎಚ್.ಎಸ್. ವೆಂಕಟೇಶಮೂರ್ತಿಯವರ ಕವಿತೆಗಳೇ ಆಗಲಿ, ನಾಟಕವೇ ಇರಲಿ, ಎರಡರಲ್ಲೂ ಸಹಜವಾದ ಒಂದು ಗುಣವಿದೆ. ಅದು-ನಾಟಕ ಮತ್ತು ಕಾವ್ಯ ಸಹಜವಾಗಿ ಹೆಣೆದುಕೊಳ್ಳುವ ಗುಣ.

**- ಬಿ.ವಿ. ಕಾರಂತ**

ಕವನ

# ಯಶಸ್ವೀ ಕವಿ

- ಪಾ. ಚಂದ್ರಶೇಖರ ಚಡಗ

ಯಶಸ್ವಿ, ತೇಜಸ್ವಿ
ಓಜಸ್ವಿ, ಭ್ರಾಜಸ್ವಿ ನಮ್ಮ ಎಚ್ಚೆಸ್ವಿ
ಪಂಪರನ್ನರ ನಾಡಿನಲಿ
ಪಂಪನೆತ್ತಿ ಪುಂಗಿಯನೂದಿ
ಭೋ ಪರಾಕು ಹೇಳಿ ಭಟ್ಟಂಗಿಗಳ ಬಲದಿಂದ
ಬೆಳೆವ ಕಾವ್ಯದ ಕಳೆಯ ಕಿತ್ತು
ಇಂದಿಗೂ ಹುಲುಸಾಗಿ
ನಳನಳಿಸುತಿದೆ ಕಾವ್ಯ ಕೃಷಿ
ಆಹಾ ಏನು ಮಾಡುವರು ನೋಡಿ !
ಗಾರುಡಿಗ ಬೇಂದ್ರೆ
ಬೆಂದು ಬೇಂದ್ರೆ ಆದಂತೆ
ನಮ್ಮ ಎಚ್ಚೆಸ್ವಿ
ಧುತ್ತೆಂದು ಎರಗಲಿಲ್ಲ
ಈ ಕಾವ್ಯ ಲೋಕದಲಿ
ಹೊದಿಗೆರೆಯ ಗೋಕುಲದಿಂದ
ಬಿಲ್ಲ ಹಬ್ಬಕೆ ಕರೆದ ಕಂಸನ
ಕರೆಯೇ ಕಂಸನ ಧ್ವಂಸಕ್ಕೆ
ಆಗಿತ್ತು ನಾಂದಿ
ಕನ್ನಡದ ಕಾವ್ಯಕ್ಕೆ ಕಳೆಕೊಟ್ಟ
ಪುತಿನ ಅಡಿಗ ಎಲ್ಲರನ್ನೂ
ವಂದಿಸುತ ಹಿಂದೆ ನೋಡುತ

ಮುಂದೆ ಹೆಜ್ಜೆಯನಿಡುವ ಯಶಸ್ವಿ ಕವಿ
ಈ ಎಚ್ಚೆಸ್ವಿ
ರಾಜಧಾನಿಯ ಕಾವ್ಯಪ್ರೇಮಿಗಳ ಕಣ್ಮಣಿ
ವೀರಕಾವ್ಯ, ಧೀರಕಾವ್ಯ
ಭಕ್ತಿಕಾವ್ಯ, ರೀತಿಕಾವ್ಯ
ನವ್ಯ ನವ್ಯೋತ್ತರಗಳ
ಎಲ್ಲಾ ಕವಿಗಳನು ವಂದಿಸುವ
ಈ ಕುಕವಿಯಿಂದ
ಕಂನಾಡ ಮರಗಳನು
ರಕ್ಷಿಸಲು ನೆರವಾದ
ಗುರುವೆ ನಿಮಗಿದೋ ವಂದನೆ
ನಿಮ್ಮ ಕೊಳಲಿನ ಗಾನ
ಓಹೋ, ಎಂತ ಅಮೃತಪಾನ
ನೇಗಿಲಯೋಗಿಗಳೂ
ಮಿಸ್ಲಿನ್ ಬಟ್ಟೆಯ ನೇಕಾರರೂ
ನೇತಾರರ ಹಿಂದೆ ಬಿದ್ದಿರುವ
ಈ ಯುಗದಿ
ಆಗೊಮ್ಮೆ ಈಗೊಮ್ಮೆ
ಮಿಂಚುವರು
ಋಷಿಯಾದ ಕೃಷಿಕರರೂ ನೇಕಾರರೂ
ಕಾರ್ಮೋಡದೆಡೆಯಲ್ಲಿ ಕೋಲ್ಮಿಂಚಿನಂತೆ
ದಾರಿತಪ್ಪಿದ
ಪಥಿಕಗದೇ ಹಣತೆ
ಗುರುವೇ ನಿಮಗೆ ವಂದಿಸುವೆ



## ಸಾದರ ಸ್ವೀಕಾರ

**ಸಂಕಟವೇ ನಿಲ್ಲು, ಸಾಧನಾಯಾಗು** (ಅನುವಾದಿತ ಕಾದಂಬರಿ)
ಮೂಲ ಲೇಖಕರು : ರಾಬಿನ್ ಕುಕ್
ಅನುವಾದಕರು : ಡಾ. ಅನಸೂಯಾದೇವಿ
ಪ್ರಕಾಶಕರು : ಸುಮುಖಿ ಪ್ರಕಾಶನ, ವಿದ್ಯಾರಣ್ಯನಗರ
ಮಾಗಡಿರಸ್ತೆ, ಬೆಂಗಳೂರು
ಪುಟಗಳು - 160 : ಬೆಲೆ - ರೂ. 70/-

**ಬಾಳಿನ ತಿರುವು** (ಕವನ ಸಂಕಲನ)
ಲೇಖಕರು : ಶ್ರೀ ಎಚ್. ಎಸ್. ಕುಲಕರ್ಣಿ
ಪ್ರಕಾಶಕರು : ಅವನಿ ರಸಿಕರ ರಂಗ ಪ್ರಕಾಶನ, ಧಾರವಾಡ
ಪುಟಗಳು - 72 : ಬೆಲೆ - ರೂ. 50/-

**ಡಾ. ದೊಡ್ಡರಂಗೇಗೌಡ ಬದುಕು ತೋರಿದ ಬೆಳಕು** (ಜೀವನ ಚರಿತ್ರೆ)
ಲೇಖಕಿ : ಶ್ರೀಮತಿ ಪ್ರೇಮಾಭಟ್
ಪ್ರಕಾಶಕರು : ವಿಶ್ವ ಚಂದ್ರ ಪ್ರಕಾಶನ, ಬಸವೇಶ್ವರನಗರ,
ಬೆಂಗಳೂರು - 79
ಪುಟಗಳು - 104 + 16, ಬೆಲೆ ರೂ 40

**ಪೂರ್ಣಕುಂಭ** (501 ಚೌಪದ ಸಂಕಲನ)
ಲೇಖಕಿ : ಶ್ರೀಮತಿ ಪ್ರೇಮಾಭಟ್
ಪ್ರಕಾಶಕರು : ಶ್ರೀ ಪ್ರೇಮಸಾಯಿ ಪ್ರಕಾಶನ
ವಿಜಯನಗರ, ಬೆಂಗಳೂರು - 40
ಪುಟಗಳು - XIV + 128 + 8 ಚಿತ್ರಗಳು, ಬೆಲೆ ರೂ 40/-

**ದೀಪದ ಕೆಳಗೆ** (ಕಥಾ ಸಂಕಲನ)
ಲೇಖಕಿ : ಶ್ರೀಮತಿ ಅನಸೂಯಾ ದೇವಿ
ಪ್ರಕಾಶಕರು : ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು
ಪುಟಗಳು - 144 : ಬೆಲೆ - ರೂ. 100/-

# ಶಿವರಾಮ ಕಾರಂತ ವೇದಿಕೆ (ರಿ)

ನಂ. 307, ಎರಡನೆಯ ವಿಭಾಗ, 17ನೇ ಅಡ್ಡರಸ್ತೆ, ರವೀಂದ್ರನಾಥ ಟಾಗೂರ್ ನಗರ,
ಬೆಂಗಳೂರು - 560 032. ದೂರವಾಣಿ : 080-23336822 / 9343766994
e-mail : pcchadaga@hotmail.com

## ಕಾರ್ಯಕಾರಿ ಸಮಿತಿ

| | | |
|---|---|---|
| 1. | ಅಧ್ಯಕ್ಷರು | ಶ್ರೀಮತಿ ರಾಧಾರಾಮಸ್ವಾಮಿ |
| 2. | ಉಪಾಧ್ಯಕ್ಷರು | ಶ್ರೀ ಬಿ. ವಿ. ಕೆದಿಲಾಯ |
| 3. | ಉಪಾಧ್ಯಕ್ಷರು | ಶ್ರೀ ಎಸ್. ಆರ್. ವಿಜಯಶಂಕರ |
| 4. | ಕಾರ್ಯದರ್ಶಿ | ಶ್ರೀ ಪಾ. ಚಂದ್ರಶೇಖರ ಚಡಗ |
| 5. | ಜೊತೆ ಕಾರ್ಯದರ್ಶಿ | ಶ್ರೀಮತಿ ಶಾಂತಕುಮಾರಿ |
| 6. | ಜೊತೆ ಕಾರ್ಯದರ್ಶಿ | ಶ್ರೀ ಡಿ. ಎಚ್. ವೀರಶೇಖರಸ್ವಾಮಿ |
| 7. | ಖಜಾಂಚಿ | ಡಾ|| ಆರ್.ಆರ್. ಪಾಂಗಾಳ್ |

## ಸದಸ್ಯರು

1. ಶ್ರೀ ಸಾ. ರಾ. ವಾರಂಬಳ್ಳಿ
2. ಶ್ರೀ ಎ. ಆರ್. ರಾಮಯ್ಯ
3. ಶ್ರೀ ಬಿ. ಸದಾಶಿವರಾವ್
4. ಶ್ರೀ ಎ.ವಿ. ಕೇಶವಮೂರ್ತಿ
5. ಶ್ರೀಮತಿ ಚಿತ್ರಾ ವಿಠಲ್
6. ಶ್ರೀ ಸೀತಾರಾಮ್, ಪಿ.ಎಚ್.ಡಿ.
7. ಶ್ರೀ ರಮೇಶ್ ಗೋಟ
8. ಶ್ರೀ ಜಿ.ಕೆ.ಎಲ್. ರಾಜನ್

'ಹಣತೆ' ಯ ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ
'ಹಣತೆ' ಯ ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

*With Best compliments*



# Patels Inn Resort

# 1, 15th Cross, 2nd Block,
Govindaraj Garden, R.T. Nagar
Bangalore - 560 032.
Email : patels_inn@yahoo.com
Website - www.patelsinn.com



## Summer Camp 2010

**For Age Group 5-14 years**

**For Details Contact :**
2333 7575 / 2333 0182,
99808 72873

